(ಕೆಯುಡಬ್ಲ್ಯೂಎಸ್‌ಡಿಬಿ) ಬೆಂಗಳೂರು, ಇದರ ರೂ. 10.00 ಲಕ್ಷ ಮತ್ತು ಅದಕ್ಕೂ ಮೇಲ್ಪಟ್ಟ ಎಲ್ಲಾ ಸಂಗ್ರಹಣೆಗಳನ್ನು ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ್**

ಪೀಠಾಧಿಕಾರಿ–1

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ

ಇಲಾಖೆ (ಇ–ಆಡಳಿತ)

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 20 EGV 2009(1), Bangalore, Dated : 13th July, 2009**

In exercise of the powers conferred by sub-section (2) of section 18A of the Karnataka Transparency in Public Procurements Act, 1999, (Karnataka Act 29 of 2000) the Government of Karnataka hereby notifies the First day of August, 2009 to be the day from which the Karnataka Urban Water Supply and Drainage Board (KUWSDB), Bengaluru, shall procure all its proucrements valued at Rs. 10.00 lakhs and above through e-Procurement platform.

By order and in the name of the Governor of Karnataka,

**CHANDRASHEKHAR**

Desk Officer-1,

Department of Personnel & Administrative

Reforms (e-Governance)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂ. ಸಿಆಸುಇ 20 ವಿಮಾಆ 2009(2), ಬೆಂಗಳೂರು, ದಿನಾಂಕ : 13ನೇ ಜುಲೈ, 2009**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ, ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎರ ಉಪಕಲಂ (2) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1ನೇ ಆಗಸ್ಟ್ 2009ರ ದಿನಾಂಕವನ್ನು ಈ ಮೂಲಕ ಅಧಿಸೂಚಿಸಿದ್ದು, ಆ ದಿನಾಂಕದಿಂದ ಎಸ್.ಡಿ.ಎಸ್. ಟಿಬಿ ಮತ್ತು ರಾಜೀವ್ ಗಾಂಧೀ ಇನ್ಸ್ಟಿಟ್ಯೂಟ್ ಆಫ್ ಚೆಸ್ಟ್ ಡಿಸೀಸಸ್, ಬೆಂಗಳೂರು, ಇದರ ರೂ. 10.00 ಲಕ್ಷ ಮತ್ತು ಅದಕ್ಕೂ ಮೇಲ್ಪಟ್ಟ ಎಲ್ಲಾ ಸಂಗ್ರಹಣೆಗಳನ್ನು ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ್**

ಪೀಠಾಧಿಕಾರಿ–1

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ

ಇಲಾಖೆ (ಇ–ಆಡಳಿತ)

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 20 EGV 2009(2), Bangalore, Dated : 13th July, 2009**

In exercise of the powers conferred by sub-section (2) of section 18A of the Karnataka Tranparency in Public Procurements Act, 1999, (Karnataka Act 29 of 2000) the Government of Karnataka hereby notifies the First day of August, 2009 to be the day from which the S.D.S. TB & Rajiv Gandhi Institute of Chest Diseases, Bengaluru, shall procure all its proucrement valued at Rs. 10.00 lakhs and above through e-Procurement platform.

By order and in the name of the Governor of Karnataka,

**CHANDRASHEKHAR**

Desk Officer-1,

Department of Personnel & Administrative

Reforms (e-Governance)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂ. ಸಿಆಸುಇ 20 ವಿಮಾಆ 2009(3), ಬೆಂಗಳೂರು, ದಿನಾಂಕ : 13ನೇ ಜುಲೈ, 2009**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ, ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎರ ಉಪಕಲಂ (2) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1ನೇ ಆಗಸ್ಟ್ 2009ರ ದಿನಾಂಕವನ್ನು ಈ ಮೂಲಕ ಅಧಿಸೂಚಿಸಿದ್ದು, ಆ ದಿನಾಂಕದಿಂದ ಅರಣ್ಯ ಇಲಾಖೆ, ಇದರ ರೂ. 10.00 ಲಕ್ಷ ಮತ್ತು ಅದಕ್ಕೂ ಮೇಲ್ಪಟ್ಟ ಎಲ್ಲಾ ಸಂಗ್ರಹಣೆಗಳನ್ನು ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ್**
ಪೀಠಾಧಿಕಾರಿ–1
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ
ಇಲಾಖೆ (ಇ–ಆಡಳಿತ)

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 20 EGV 2009(3), Bangalore, Dated : 13th July, 2009**

In exercise of the powers conferred by sub-section (2) of section 18A of the Karnataka Tranparency in Public Procurements Act, 1999, (Karnataka Act 29 of 2000) the Government of Karnataka hereby notifies the First day of August, 2009 to be the day from which the Forest Department shall procure all its proucrements valued at Rs. 10.00 lakhs and above through e-Procurement platform.

By order and in the name of the Governor of Karnataka,

**CHANDRASHEKHAR**
Desk Officer-1,
Department of Personnel & Administrative
Reforms (e-Governance)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂ. ಸಿಆಸುಇ 20 ವಿಮಾಆ 2009(4), ಬೆಂಗಳೂರು, ದಿನಾಂಕ : 13ನೇ ಜುಲೈ, 2009**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ, ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎರ ಉಪಕಲಂ (2) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1ನೇ ಆಗಸ್ಟ್ 2009ರ ದಿನಾಂಕವನ್ನು ಈ ಮೂಲಕ ಅಧಿಸೂಚಿಸಿದ್ದು, ಆ ದಿನಾಂಕದಿಂದ ಬೆಳಗಾವಿ, ಹುಬ್ಬಳ್ಳಿ–ಧಾರವಾಡ, ಗುಲ್ಬರ್ಗ, ಬಳ್ಳಾರಿ, ಮೈಸೂರು, ಮಂಗಳೂರು ಮತ್ತು ದಾವಣಗೆರೆ ನಗರಗಳ ಪ್ರತಿಯೊಂದು ಮಹಾನಗರ ಪಾಲಿಕೆಯ ರೂ. 10.00 ಲಕ್ಷ ಮತ್ತು ಅದಕ್ಕೂ ಮೇಲ್ಪಟ್ಟ ಎಲ್ಲಾ ಸಂಗ್ರಹಣೆಗಳನ್ನು ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ್**
ಪೀಠಾಧಿಕಾರಿ–1
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ
ಇಲಾಖೆ (ಇ–ಆಡಳಿತ)

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 20 EGV 2009(4), Bangalore, Dated : 13th July, 2009**

In exercise of the powers conferred by sub-section (2) of section 18A of the Karnataka Tranparency in Public Procurements Act, 1999, (Karnataka Act 29 of 2000) the Government of Karnataka

hereby notifies the First day of August, 2009 to be the day from which the each of the Corporations of the cities of Belgaum, Hubli-Dharwad, Gulbarga, Bellary, Mysore, Mangalore and Davanagere, shall procure all its procurements valued at Rs. 10.00 lakhs and above through e-Procurement platform.

By order and in the name of the Governor of Karnataka,
**CHANDRASHEKHAR**
Desk Officer-1,
Department of Personnel & Administrative
Reforms (e-Governance)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಆಗಸ್ಟ್ ೧೦, ೨೦೦೯ (ಶ್ರಾವಣ, ೧೯ ಶಕ ವರ್ಷ ೧೯೩೧) | ನಂ. ೬೨೬ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ನಅಇ 19 ಮೈಅಪ್ರಾ 2007 ದಿನಾಂಕ: 14.02.2007.
2) ಬಂಟ್ವಾಳ ಪುರಸಭಾ ಕಾರ್ಯಾಲಯದ ಪತ್ರ ಸಂಖ್ಯೆ: ಪು.ಯೋ.ಪ್ರಾ/ಬಂ.ಮ.ಯೋ.2.ಸಿ.ಆರ್.50/2008–09 ದಿನಾಂಕ 05.03.2009.
3) ನಗರ ಯೋಜನಾ ನಿರ್ದೇಶಕರ ಕಛೇರಿಯ ಕಡತ ಸಂಖ್ಯೆ: ನಯೋ(17)/ಬಂಟ್ವಾಳ/ಮ.ಯೋ.ಅಂ/2068/2009 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ ದಿನಾಂಕ: 26.03.2009.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಬಂಟ್ವಾಳ ಪುರಸಭೆ ಕಾರ್ಯಾಲಯವು ಬಂಟ್ವಾಳ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಯ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 13(3) ರನ್ವಯ ಅಗತ್ಯ ಕ್ರಮ ಜರುಗಿಸಿ, ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ನಗರ ಯೋಜನಾ ಇಲಾಖೆ ಮುಖಾಂತರ ಸಲ್ಲಿಸಲಾಗಿದೆ.

ಮೇಲೆ ಓದಲಾದ (3)ರ ನಗರ ಯೋಜನಾ ನಿರ್ದೇಶಕರ ಕಡತದಲ್ಲಿ ಬಂಟ್ವಾಳ ಪಟ್ಟಣದ ಜನಸಂಖ್ಯೆಯು 2021ರಲ್ಲಿ 48,000ಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ, ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಬಂಟ್ವಾಳ ಸ್ಥಳೀಯ ಯೋಜನಾ ಪ್ರದೇಶದ 2814 ಹೆಕ್ಟೇರ್‌ಗಳಲ್ಲಿ 1199.44 ಹೆಕ್ಟೇರ್‌ಗಳನ್ನು ಅಭಿವೃದ್ಧಿಗಾಗಿ ಬೇಕಾಗುವ ಪ್ರದೇಶವೆಂದು ತೀರ್ಮಾನಿಸಿ ಮಹಾ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 1199.44 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 740.99 ಹೆಕ್ಟೇರ್ (ಶೇ.61.79), ವಾಣಿಜ್ಯಕ್ಕಾಗಿ 43.21 ಹೆಕ್ಟೇರ್ (ಶೇ.3.60), ಕೈಗಾರಿಕೆಗಾಗಿ 11.79 ಹೆಕ್ಟೇರ್ (ಶೇ.0.98), ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕಾಗಿ 30.24 ಹೆಕ್ಟೇರ್ (ಶೇ.2.52), ನಾಗರೀಕ ಸೌಲಭ್ಯಕ್ಕಾಗಿ 3.25 ಹೆಕ್ಟೇರ್ (ಶೇ.0.27), ಉದ್ಯಾನವನ/ಬಯಲು ಜಾಗೆಗಾಗಿ 43.33 ಹೆಕ್ಟೇರ್ (ಶೇ.3.61), ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 326.63 ಹೆಕ್ಟೇರ್ (ಶೇ.27.23) ಪ್ರದೇಶವನ್ನು ನಿಗಧಿಪಡಿಸಿ, ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(3) ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ. ಈ ವಿಷಯವನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 214 ಮೈಅಪ್ರಾ 2009, ಬೆಂಗಳೂರು, ದಿನಾಂಕ: 13.07.2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ

13(3) ರನ್ವಯ ಅಂತಿಮ ಅನುಮೋದನೆಯನ್ನು ನೀಡಲಾಗಿದೆ. ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಆಗಸ್ಟ್ ೧೦, ೨೦೦೯ (ಶ್ರಾವಣ, ೧೯ ಶಕ ವರ್ಷ ೧೯೩೧) | ನಂ. ೬೭೭ |
| --- | --- | --- |

**ಕರ್ನಾಟಕ ಸರ್ಕಾರದ ನಡವಳಿಗಳು**

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ :** ಬೆಳಗಾವಿ ಜಿಲ್ಲೆ, ನಿಪ್ಪಾಣಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆ (ಪರಿಷ್ಕೃತ–I)ಗೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
4) ಸರ್ಕಾರದ ಆದೇಶ ಸಂಖ್ಯೆ: ನಅಇ 289 ಬೆಮಪ್ರಾ 2002 ದಿನಾಂಕ: 17.02.2003 ಹಾಗೂ ನಅಇ 289 ಬೆಮಪ್ರಾ 2002 (ಪಿ) ದಿನಾಂಕ 27.05.2004.
5) ನಿಪ್ಪಾಣಿ ನಗರ ಯೋಜನಾ ಪ್ರಾಧಿಕಾರದ ಪತ್ರ ಸಂಖ್ಯೆ: ನಯೋಪ್ರಾನಿ/ಮಾಪ್ಲಾ (ಪ–I)/2008–09 ದಿ:30.03.2009.
6) ನಗರ ಯೋಜನಾ ನಿರ್ದೇಶಕರ ಕಛೇರಿಯ ಕಡತ ಸಂಖ್ಯೆ : ನಯೋ(7)/ಉನಿI/ನಿಪ್ಪಾಣಿ/ ಮ.ಯೋ(ಪ–1)/ ತಾತ್ಕಾಲಿಕ/2009 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ ದಿನಾಂಕ: 11.05.2009.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಬೆಳಗಾವಿ ಜಿಲ್ಲೆ, ನಿಪ್ಪಾಣಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ದಿನಾಂಕ 17.02.2003 ರಂದು ಅಂತಿಮ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ನಿಪ್ಪಾಣಿ ನಗರ ಯೋಜನಾ ಪ್ರಾಧಿಕಾರವು ನಿಪ್ಪಾಣಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(ಡಿ) ರನ್ವಯ ಪರಿಷ್ಕರಿಸಿ, ಮಹಾ ಯೋಜನೆ (ಪರಿಷ್ಕೃತ–I)ಯನ್ನು ರೂಪಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು, ನಿಪ್ಪಾಣಿ ಪಟ್ಟಣದ ಜನಸಂಖ್ಯೆಯು 2021ರಲ್ಲಿ 01 ಲಕ್ಷಕ್ಕೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ, ಮಹಾ ಯೋಜನೆ (ಪರಿಷ್ಕೃತ–I)ಯನ್ನು ರೂಪಿಸಲಾಗಿದೆ. ನಿಪ್ಪಾಣಿ ಪಟ್ಟಣದ ಜನಸಂಖ್ಯೆ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹಾಲಿ ಬೆಳವಣಿಗೆಯ ಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನೆ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ ಯೋಜನಾ ತತ್ವಗಳಿಗೆ ಅನುಗುಣವಾಗಿ ಹಾಗೂ ಮಹಾ ಯೋಜನೆಯ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಪ್ರಕರಣ (9) ರಿಂದ (12)ರವರೆಗೆ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ, ನಗರದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 1502.81 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 729.23 ಹೆಕ್ಟೇರ್ (ಶೇ.50.06), ವಾಣಿಜ್ಯಕ್ಕಾಗಿ 83.89 ಹೆಕ್ಟೇರ್ (ಶೇ.5.76), ಕೈಗಾರಿಕೆಗಾಗಿ 54.82 ಹೆಕ್ಟೇರ್ (ಶೇ.3.76), ಸಾರ್ವಜನಿಕ/ಅರೆ ಸಾರ್ವಜನಿಕ ವಲಯಕ್ಕೆ 59.03 ಹೆಕ್ಟೇರ್ (ಶೇ.4.05), ನಾಗರೀಕ ಸೌಲಭ್ಯಕ್ಕಾಗಿ 0.61 ಹೆಕ್ಟೇರ್ (ಶೇ.0.04), ಉದ್ಯಾನವನ/ಬಯಲು ಜಾಗೆಗಾಗಿ 93.99 ಹೆಕ್ಟೇರ್ (ಶೇ.6.45) ಹಾಗೂ ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 435.19 ಹೆಕ್ಟೇರ್ (ಶೇ.29.88) ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1) ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 173 ಬೆಮಪ್ರಾ 2009, ಬೆಂಗಳೂರು, ದಿನಾಂಕ: 13.07.2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನಿಪ್ಪಾಣಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪರಿಷ್ಕೃತ–I)ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1) ರನ್ವಯ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆ (ಪರಿಷ್ಕೃತ–I)ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ



# ವಿಶೇಷ ಪತ್ರಿಕೆ

| | | |
|---|---|---|
| ಭಾಗ – I | ಬೆಂಗಳೂರು, ಸೋಮವಾರ, ಆಗಸ್ಟ್ ೧೦, ೨೦೦೯ (ಶ್ರಾವಣ, ೧೯ ಶಕ ವರ್ಷ ೧೯೩೧) | ನಂ. ೬೭೮ |


**ಕರ್ನಾಟಕ ಸರ್ಕಾರದ ನಡವಳಿಗಳು**

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ :** ಗದಗ್ ಜಿಲ್ಲೆ, ಲಕ್ಷ್ಮೇಶ್ವರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–I) ಗೆ ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :**

7) ಸರ್ಕಾರದ ಆದೇಶ ಸಂಖ್ಯೆ: ನಅಇ 246 ಬೆಮಪ್ರಾ 2006, ದಿನಾಂಕ: 17.08.2006.
8) ಮುಖ್ಯಾಧಿಕಾರಿ, ಪುರಸಭೆ ಯೋಜನಾ ಪ್ರಾಧಿಕಾರ, ಲಕ್ಷ್ಮೇಶ್ವರ ಇವರ ಪತ್ರ ಸಂಖ್ಯೆ: ಪುಸಲ/ಯೋ/ಪ್ರಾ.ಲ/ ಮಾಪ್ಲಾನ್/ವಹಿ/2008–09/579, ದಿನಾಂಕ: 17.01.2009.
9) ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಏಕ ಕಡತ ಸಂಖ್ಯೆ:ನಯೋ(9)/ಉನಿ I /ಲಕ್ಷ್ಮೇಶ್ವರ.ಮ.ಯೋ.(ಪ –1)/ಅಂತಿಮ/2009 ರಲ್ಲಿ ದಿನಾಂಕ: 02.03.2009 ರಂದು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ, ಲಕ್ಷ್ಮೇಶ್ವರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪ–1)ಗೆ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಲಕ್ಷ್ಮೇಶ್ವರ ಪುರಸಭೆ ಯೋಜನಾ ಪ್ರಾಧಿಕಾರವು ಲಕ್ಷ್ಮೇಶ್ವರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆ (ಪ–1)ಯ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1) ರನ್ವಯ ಅಗತ್ಯ ಕ್ರಮ ಜರುಗಿಸಿ, ಮಹಾ ಯೋಜನೆ (ಪ–1)ಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ನಗರ ಯೋಜನಾ ಇಲಾಖೆಯ ಮುಖಾಂತರ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ನಗರ ಯೋಜನಾ ನಿರ್ದೇಶಕರ ಏಕ ಕಡತದಲ್ಲಿ ಲಕ್ಷ್ಮೇಶ್ವರ ಪಟ್ಟಣದ ಜನಸಂಖ್ಯೆಯು 2021ರಲ್ಲಿ 50,000ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ, ಮಹಾ ಯೋಜನೆ (ಪ–1)ಯನ್ನು ತಯಾರಿಸಲಾಗಿದೆ. ಲಕ್ಷ್ಮೇಶ್ವರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ 703 ಹೆಕ್ಟೇರ್ ಪ್ರದೇಶದಲ್ಲಿ 500 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ ಒಟ್ಟು 500 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 239.61 ಹೆಕ್ಟೇರ್ (ಶೇ.47.92), ವಾಣಿಜ್ಯಕ್ಕಾಗಿ 41.26 ಹೆಕ್ಟೇರ್ (ಶೇ.8.25), ಕೈಗಾರಿಕೆಗಾಗಿ 58.18 ಹೆಕ್ಟೇರ್ (ಶೇ.11.64), ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕಾಗಿ 31.45 ಹೆಕ್ಟೇರ್ (ಶೇ.6.29),

ಉದ್ಯಾನವನ/ ಬಯಲು ಜಾಗೆಗಳಿಗೆ 28.99 ಹೆಕ್ಟೇರ್ (ಶೇ.5.80), ನಾಗರೀಕ ಸೌಲಭ್ಯಕ್ಕಾಗಿ 1.24 ಹೆಕ್ಟೇರ್ (ಶೇ.0.25) ಹಾಗೂ ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 99.27 ಹೆಕ್ಟೇರ್ (ಶೇ.19.85) ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾ ಯೋಜನೆ (ಪ–1)ಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆ (ಪ–1)ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(3) ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 126 ಬೆಮಪ್ರಾ 2009, ಬೆಂಗಳೂರು, ದಿನಾಂಕ: 24.06.2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಲಕ್ಷ್ಮೇಶ್ವರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪ–1)ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(3) ರನ್ವಯ ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆ (ಪ–1)ಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಆಗಸ್ಟ್ ೧೦, ೨೦೦೯ (ಶ್ರಾವಣ, ೧೯ ಶಕ ವರ್ಷ ೧೯೩೧) | ನಂ. ೬೨೯ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ಕಾರ್ಮಿಕ ಸಚಿವಾಲಯ**

**ವಿಷಯ :** 1998ನೇ ಸಾಲಿನ ಪ್ರೋಬೇಷನರಿ ಕಾರ್ಮಿಕ ಅಧಿಕಾರಿಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ :** 10) ಸರ್ಕಾರದ ಆದೇಶ ಸಂಖ್ಯೆ : ಕಾಇ 46 ಎಲ್‌ಇಟಿ 2006, ದಿ : 29.04.2006
11) ಕಾರ್ಮಿಕ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ : ಜಿಜಿಡ್‌ಟಿ/ಸಿಆರ್–144/2007–08, ದಿನಾಂಕ : 25.06.2008 ಮತ್ತು 6.04.2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ದಿನಾಂಕ : 29.04.2006ರ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೋಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1977ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ 1) ಶ್ರೀ ಜಾನ್ಸನ್ ಕೆ.ಜಿ., 2) ಶ್ರೀ ನಾಗೇಶ್ ಡಿ.ಜಿ, 3) ಶ್ರೀ ಗುರುಪ್ರಸಾದ್ ಹೆಚ್.ಎಲ್, 4) ಶ್ರೀಮತಿ ಶೀಲಾ ಎಂ, 5) ಶ್ರೀ ರೇವಣ್ಣ ಎಸ್, 6) ಶ್ರೀ ಧರಣೇಶ್, 7) ಶ್ರೀ ನಾಗರಾಜ ಕೆ. ಬಿ, ಈ 7 ಜನ ಅಭ್ಯರ್ಥಿಗಳಿಗೆ ಕಾರ್ಮಿಕ ಅಧಿಕಾರಿಗಳ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿದೆ. ಸದರಿ ಅಧಿಸೂಚನೆಯಲ್ಲಿ ಈ ಅಭ್ಯರ್ಥಿಗಳು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕಾರ್ಮಿಕ ಅಧಿಕಾರಿ ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ 7 ಜನ ಕಾರ್ಮಿಕ ಅಧಿಕಾರಿಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಎಲ್ಲಾ 7 ಜನ ಕಾರ್ಮಿಕ ಅಧಿಕಾರಿಗಳನ್ನು ಎರಡು ವರ್ಷಗಳ ತರಬೇತಿಗಾಗಿ ತೈನಾತಿಸಲಾಗಿತ್ತು.

ಕಾರ್ಮಿಕ ಆಯುಕ್ತರು ಮೇಲೆ ಓದಲಾದ ಕ್ರಮಸಂಖ್ಯೆ (2) ದಿನಾಂಕ : 25.06.2008ರ ಪತ್ರದಲ್ಲಿ 1998ನೇ ಬ್ಯಾಚ್‌ನ ಪ್ರೋಬೇಷನರಿ ಕಾರ್ಮಿಕ ಅಧಿಕಾರಿಗಳ ಪರೀಕ್ಷಾರ್ಥ ಅವಧಿಯು ಅವರುಗಳ ಹೆಸರುಗಳ ಎದುರಿಗೆ ನಮೂದಿಸಿರುವ ದಿನಾಂಕದಂದು ಮುಕ್ತಾಯವಾಗಿರುತ್ತದೆಂದು ಹಾಗೂ ನಿಗಧಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ)

ಉತ್ತೀರ್ಣರಾಗಿರುತ್ತಾರೆಂದು, ಇವರುಗಳ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಅಥವಾ ಕ್ರಿಮಿನಲ್ ಮೊಕದ್ದಮೆಗಳು ಬಾಕಿ ಇರುವುದಿಲ್ಲವೆಂದೂ, ಆದ್ದರಿಂದ ಈ ಪತ್ರಾಂಕಿತ ಅಧಿಕಾರಿಗಳು 1977ರ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿಯ ನಿಯಮ 5 ರನ್ವಯ ಪರೀಕ್ಷಾರ್ಥಿ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಮತ್ತು 06.04.2009ರ ಪತ್ರದಲ್ಲಿ ಎಲ್ಲಾ ಕಾರ್ಮಿಕ ಅಧಿಕಾರಿಗಳ 2006–07 ಮತ್ತು 2007–08ನೇ ಸಾಲಿನ ಕಾರ್ಯ ನಿರ್ವಹಣಾ ವರದಿಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಇದನ್ನು ಪರಿಶೀಲಿಸಿದಲ್ಲಿ ಇವರುಗಳ ವಿರುದ್ಧ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ.

ಕಾರ್ಮಿಕ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರನ್ವಯ ಈ 7 ಜನ ಕಾರ್ಮಿಕ ಅಧಿಕಾರಿಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಾಇ 266 ಎಲ್ಇಟಿ 2008, ಬೆಂಗಳೂರು, ದಿನಾಂಕ : 27–06–2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಈ ಕೆಳಕಂಡ 7 ಜನ ಕಾರ್ಮಿಕ ಅಧಿಕಾರಿಗಳು ಅವರ ಹೆಸರಿನ ಮುಂದೆ ಕಲಂ 4ರಲ್ಲಿ ನಮೂದಿಸಿರುವ ದಿನಾಂಕದಿಂದ ಜಾರಿಗೆ ಬರುವಂತೆ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರಡಿ ಘೋಷಿಸಲಾಗಿದೆ.

| ಕ್ರಮ ಸಂಖ್ಯೆ | ಪರಿವೀಕ್ಷಣಾ ಕಾರ್ಮಿಕ ಅಧಿಕಾರಿಗಳ ಹೆಸರು | ಕರ್ತವ್ಯಕ್ಕೆ ಹಾಜರಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | 2 | 3 | 4 |
| 1 | ಶ್ರೀ ಜಾನ್ಸನ್ ಕೆ.ಜಿ. | 04.05.2006 | 04.05.2008 |
| 2 | ಶ್ರೀ ನಾಗೇಶ್ ಡಿ.ಜಿ. | 09.05.2006 | 09.05.2008 |
| 3 | ಶ್ರೀ ಗುರುಪ್ರಸಾದ್ ಹೆಚ್.ಎಲ್. | 06.05.2006 | 06.05.2008 |
| 4 | ಶ್ರೀಮತಿ ಶೀಲಾ ಎಂ. | 16.05.2006 | 16.05.2008 |
| 5 | ಶ್ರೀ ರೇವಣ್ಣ ಎಸ್. | 03.05.2006 | 03.05.2008 |
| 6 | ಶ್ರೀ ಧರಣೇಶ್ | 04.05.2006 | 04.05.2008 |
| 7 | ಶ್ರೀ ನಾಗರಾಜ ಕೆ. ಬಿ. | 04.05.2006 | 04.05.2008 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಎನ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಆಗಸ್ಟ್ ೧೦, ೨೦೦೯ (ಶ್ರಾವಣ, ೧೯ ಶಕ ವರ್ಷ ೧೯೩೧) | ನಂ. ೬೮೦ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು
## ಕಂದಾಯ ಸಚಿವಾಲಯ

**ವಿಷಯ :** ಶ್ರೀ ವಾಗ್ದೇವಿ ಸದ್ವಿದ್ವಾವರ್ಧಿನಿ ಟ್ರಸ್ಟ್ (ರಿ), ಬೆಂಗಳೂರು ರವರಿಗೆ ಮೈಸೂರು ತಾಲ್ಲೂಕು ಇಲವಾಲ ಹೋಬಳಿ ಆನಂದೂರು ಗ್ರಾಮದ ಸರ್ವೆ ನಂಬರ್. 280 ರ ಪೈಕಿ 4.20 ಎಕರೆ ಜಮೀನನ್ನು ಗೋಶಾಲೆ ಮತ್ತು ಭಾರತೀಯ ಪ್ರಾಚೀನ ವಿದ್ಯಾ ಗುರುಕುಲ ಸ್ಥಾಪಿಸಲು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ :** ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರು ದಿನಾಂಕ : 24.08.2007

ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರು ದಿನಾಂಕ : 24.08.2007 ರಂದು ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯಲ್ಲಿ, ಮೈಸೂರು ಜಿಲ್ಲೆಯ ಮೈಸೂರು ತಾಲ್ಲೂಕಿನ ಇಲವಾಲ ಹೋಬಳಿ ಆನಂದೂರು ಗ್ರಾಮದ ಸರ್ವೆ

ನಂಬರ್ .280ರಲ್ಲಿ (ಖಾತ ಸಂಖ್ಯೆ : 211) 4.20 ಎಕರೆ ಸರ್ಕಾರಿ ಬಂಜರು ಭೂಮಿಯನ್ನು ಗೋಶಾಲೆ ಮತ್ತು ಭಾರತೀಯ ಪ್ರಾಚೀನ ವಿದ್ಯೆಯನ್ನು ಪ್ರತಿಬಿಂಬಿಸುವ ಗುರುಕುಲವನ್ನು ಸ್ಥಾಪಿಸಿ ಜ್ಞಾನದಾಹಿ ವಿದ್ಯಾರ್ಥಿಗಳಿಗೆ ವಿದ್ಯೆಯನ್ನು ಬೋಧಿಸುವ ಸಲುವಾಗಿ ಶ್ರೀ ವಾಗ್ದೇವಿ ಸದ್ವಿದ್ಯಾವರ್ಧಿನಿ ಟ್ರಸ್ಟ್ (ರಿ), ಬೆಂಗಳೂರು ರವರಿಗೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಅಧ್ಯಕ್ಷರು ಶ್ರೀ ವಾಗ್ದೇವಿ ಸದ್ವಿದ್ಯಾವರ್ಧಿನಿ ಟ್ರಸ್ಟ್ (ರಿ) ಬೆಂಗಳೂರು ಇವರು ತಮ್ಮ ಮನವಿಯಲ್ಲಿ ತಮ್ಮ ಸಂಸ್ಥೆಯು ಗುರುಕುಲವನ್ನು ನಡೆಸುತ್ತಿದ್ದು ಇದರ ಮುಖ್ಯ ಧ್ಯೇಯೋದ್ದೇಶವು ಭಾರತೀಯ ಗೋತಳಿಗಳನ್ನು ಸಂರಕ್ಷಿಸಿ ಗೋ ಉತ್ಪನ್ನಗಳನ್ನು ಸಂಶೋಧಿಸುವುದು ಮತ್ತು ಭಾರತೀಯ ಪ್ರಾಚೀನ ವಿದ್ಯೆಯನ್ನು ಪ್ರತಿಬಿಂಬಿಸುವ ಗುರುಕುಲವನ್ನು ಸ್ಥಾಪಿಸುವುದು ಆಗಿದೆ. ಈ ಧ್ಯೇಯೋದ್ದೇಶ ಸಾಧನೆಗಾಗಿ ಮೈಸೂರು ಜಿಲ್ಲೆಯ ಮೈಸೂರು ತಾಲ್ಲೂಕಿನ ಇಲವಾಲ ಹೋಬಳಿ ಆನಂದೂರು ಗ್ರಾಮದ ಸ. ನಂ. 280ರಲ್ಲಿ (ಖಾತೆ ಸಂಖ್ಯೆ : 211) 10–27 ಎಕರೆ ಸರ್ಕಾರಿ ಬಂಜರು ಭೂಮಿಯನ್ನು ಖಾಯಂ ಆಗಿ ಮಂಜೂರು ಮಾಡುವಂತೆ ಅಥವಾ ಗುತ್ತಿಗೆ ಆಧಾರದ ಮೇಲೆ ನೀಡುವಂತೆ ಕೋರಿರುತ್ತಾರೆ. ಹಾಗೂ ಈ ಜಮೀನಿಗೆ ಸರ್ಕಾರವು ನಿಗಧಿಪಡಿಸಿದ ಮೌಲ್ಯವನ್ನು ಭರಿಸುವುದಾಗಿ ಸಹ ತಿಳಿಸಿರುತ್ತಾರೆ.

ಮೈಸೂರು ತಾಲ್ಲೂಕು ಇಲವಾಲ ಹೋಬಳಿ ಆನಂದೂರು ಗ್ರಾಮದ ಸರ್ವೆ ನಂ. 280ರಲ್ಲಿ ಒಟ್ಟು 15.27 ಎಕರೆ ವಿಸ್ತೀರ್ಣವಿದ್ದು, ಇದರಲ್ಲಿ 5.00 ಎಕರೆ ಖರಾಬು 10.27 ಎಕರೆ ಸರ್ಕಾರಿ ಬಂಜರು ಜಮೀನಿದ್ದು ಆರ್.ಟಿ.ಸಿ. ಪ್ರಕಾರ ಜಮೀನು ಸರ್ಕಾರಿ ಬಂಜರು ಎಂದು ವರ್ಗೀಕರಿಸಲಾಗಿದೆ. ಒಟ್ಟು 15.27 ಜಮೀನು ಪೈಕಿ ಖರಾಬು ಮತ್ತು ರಸ್ತೆಗಾಗಿ 11.07 ಎಕರೆ ಜಮೀನು ವಿಲೇ ಆಗಿದ್ದು, ಉಳಿಕೆ 4.20 ಎಕರೆ ಜಮೀನು ಮಾತ್ರ ಮಂಜೂರಾತಿಗೆ ಲಭ್ಯವಿರುತ್ತದೆ. ಸದರಿ ಜಮೀನು Comprehensive Development Plan/Outline Development plan ವಲಯದಲ್ಲಿ ಮತ್ತು ಮೈಸೂರು ನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವುದಿಲ್ಲ ಎಂದು ಜಿಲ್ಲಾಧಿಕಾರಿಗಳು ವರದಿ ನೀಡಿರುತ್ತಾರೆ. ಸದರಿ ಜಮೀನನ್ನು ಮಂಜೂರು ಮಾಡುವ ಬಗ್ಗೆ ನೀರಾವರಿ ಇಲಾಖೆಯ ಅಭಿಪ್ರಾಯ ಪಡೆಯಲಾಗಿ, ಈ ಜಮೀನು ಕೃಷ್ಣರಾಜಸಾಗರ ಅಣೆಕಟ್ಟಿನ ಹಿನ್ನೀರಿಗೆ ಹೊಂದಿಕೊಂಡಿದ್ದು, ಜಲಾಶಯದ ಗರಿಷ್ಠ ನೀರಿನ ಮಟ್ಟದ ಭೂ ಪ್ರದೇಶದಿಂದ ಸುಮಾರು 2000 ಅಡಿ ದೂರದಲ್ಲಿದ್ದು, ಜಮೀನು ನೀರಾವರಿ ಇಲಾಖೆಗೆ ಸೇರಿಲ್ಲವೆಂದು ತಿಳಿಸಿರುತ್ತಾರೆ ಮತ್ತು ಶಾಲೆಯ ಸಮೀಪದಲ್ಲಿ ಇರುವುದರಿಂದ ಮಳೆಗಾಲ ಹಾಗೂ ಜಲಾಶಯ ಭರ್ತಿಯಾದ ವೇಳೆಯಲ್ಲಿ ಈ ಪ್ರದೇಶದಲ್ಲಿ ಶೀತಲ ವಾತಾವರಣವುಂಟಾಗಿ ವಿದ್ಯಾರ್ಜನೆ ಮಾಡುವ ಮಕ್ಕಳ ಆರೋಗ್ಯದ ಮೇಲೆ ಹಾನಿವುಂಟಾಗುವ ಸಂಭವವಿರುತ್ತದೆ ಎಂದು ವರದಿ ಮಾಡಿರುತ್ತಾರೆ.

ಸರ್ಕಾರವು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 19(5) (i) ಮತ್ತು (ii) ಕ್ಕೆ ಅಧಿಸೂಚನೆ ಸಂಖ್ಯೆ : ಆರ್‌ಡಿ 37 ಎಲ್‌ಜಿಪಿ 2002 ದಿನಾಂಕ : 23.04.2005 ರಂತೆ ಮಾಡಿರುವ ತಿದ್ದುಪಡಿಯಂತೆ ಶೈಕ್ಷಣಿಕ ಸಂಸ್ಥೆಗಳಿಗೆ ಭೂ ಮಂಜೂರಾತಿ ಅಥವಾ ಗುತ್ತಿಗೆಗಾಗಿ ಸಲ್ಲಿಸುವ ಅರ್ಜಿಯ ಜೊತೆಯಲ್ಲಿ ಅಂತಹ ಸಂಸ್ಥೆಗಳ ತೃಪ್ತಿಕರ ಕಾರ್ಯನಿರ್ವಹಣೆಯ ರುಜುವಾತಾಗಿ ಅರ್ಜಿ ದಿನಾಂಕಕ್ಕೆ ಸಂಸ್ಥೆಯು ನೋಂದಣಿಯಾದ 5 ವರ್ಷಗಳ ಅವಧಿಯ ಲೆಕ್ಕಪತ್ರಗಳ ಪರಿಶೋಧಿತ ವಿವರಣೆ ಪಟ್ಟಿ ಮತ್ತು ವರದಿಗಳು ಇರತಕ್ಕದ್ದಾಗಿರುತ್ತದೆ. ಆದರೆ ಶ್ರೀ ವಾಗ್ದೇವಿ ಸದ್ವಿದ್ಯಾವರ್ಧಿನಿ ಟ್ರಸ್ಟ್ (ರಿ) ಬೆಂಗಳೂರು ಇದು ದಿನಾಂಕ : 10.11.2006 ರಂದು ನೋಂದಣಿಯಾಗಿದ್ದು, 2 ವರ್ಷಗಳ ಅವಧಿಯನ್ನು ಮಾತ್ರ ಪೂರೈಸಿರುತ್ತದೆ ಹಾಗೂ ಒಂದು ವರ್ಷದ ಅವಧಿಯ ಅಡಿಟ್ ವರದಿಯನ್ನು ಮಾತ್ರ ಸಲ್ಲಿಸಿರುತ್ತದೆ. ಕಾರಣ ಇಂತಹ ಸಂಸ್ಥೆಗಳಿಗೆ ಸರ್ಕಾರಿ ಜಮೀನು ಮಂಜೂರು ಮಾಡಲು ಅವಕಾಶ ಇರುವುದಿಲ್ಲ.

ಆದರೆ, ಸದರಿ ಸಂಸ್ಥೆಯು ಗೋಶಾಲೆ ಮತ್ತು ಗುರುಕುಲ ಸ್ಥಾಪನೆ ಮೂಲಕ ಜ್ಞಾನಾರ್ಜನೆ ಕಾರ್ಯ ಕೈಗೊಳ್ಳುವ ಉದ್ದೇಶ ಹೊಂದಿರುವುದನ್ನು ಮನಗಂಡು ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ನಿಯಮ 27ರಲ್ಲಿನ ಅಧಿಕಾರದಂತೆ ನಿಯಮ 19(5) (i) ಮತ್ತು (ii)ನ್ನು ಸಡಿಲಿಸಿ ಪ್ರಸ್ತಾಪಿತ ಜಮೀನನ್ನು ಶ್ರೀ ವಾಗ್ದೇವಿ ಸದ್ವಿದ್ಯಾವರ್ಧಿನಿ ಟ್ರಸ್ಟ್ (ರಿ) ಬೆಂಗಳೂರು ಸಂಸ್ಥೆಗೆ 30 ವರ್ಷಗಳ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಪರಿಶೀಲಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 32 ಎಲ್. ಜಿ. ಎಂ 2007, ಬೆಂಗಳೂರು, ದಿನಾಂಕ : 3/ 06/ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಮಂಜೂರಾತಿ ನಿಯಮ 27ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೈಸೂರು ಜಿಲ್ಲೆಯ, ಮೈಸೂರು ತಾಲ್ಲೂಕಿನ ಇಲವಾಲ ಹೋಬಳಿ ಆನಂದೂರು ಗ್ರಾಮದ ಸರ್ವೆ ನಂ. 280 ರಲ್ಲಿ 4 ಎಕರೆ 20 ಗುಂಟೆ ಜಮೀನನ್ನು ಪ್ರಸಕ್ತ ಮಾರುಕಟ್ಟೆ ಬೆಲೆಯ ಶೇ. 10 ರಷ್ಟು ಗುತ್ತಿಗೆ ದರವನ್ನು ನಿಗಧಿಪಡಿಸಿ ಮತ್ತು ಇತರೇ ಗುತ್ತಿಗೆ ಷರತ್ತುಗಳನ್ನು ವಿಧಿಸಿ, ಶ್ರೀ ವಾಗ್ದೇವಿ ಸದ್ವಿದ್ಯಾವರ್ಧಿನಿ ಟ್ರಸ್ಟ್ (ರಿ), ಬೆಂಗಳೂರು ಇವರಿಗೆ ಗೋಶಾಲೆ ಮತ್ತು ಭಾರತೀಯ ಪ್ರಾಚೀನ ವಿದ್ಯೆಯನ್ನು ಪ್ರತಿಬಿಂಬಿಸುವ ಗುರುಕುಲವನ್ನು ಸ್ಥಾಪಿಸುವ ಉದ್ದೇಶಕ್ಕಾಗಿ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಸಂಸ್ಥೆಯು ಸದರಿ ಜಮೀನನ್ನು 3 ವರ್ಷಗಳ ಅವಧಿಯಲ್ಲಿ ಯಾವ ಉದ್ದೇಶಕ್ಕಾಗಿ ಮಂಜೂರಾಗಿದೆಯೋ ಆ ಉದ್ದೇಶಕ್ಕೆ ಮಾತ್ರ ಉಪಯೋಗಿಸತಕ್ಕದ್ದು, ತಪ್ಪಿದಲ್ಲಿ ಸದರಿ ಜಮೀನನ್ನು ಸರ್ಕಾರವು ಹಿಂದಕ್ಕೆ ಪಡೆಯುವ ಷರತ್ತು ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್. ಕೃಷ್ಣಪ್ಪ**
ಪೀಠಾಧಿಕಾರಿ
ಕಂದಾಯ ಇಲಾಖೆ (ಭೂ ಮಂಜೂರಾತಿ – 2)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಆಗಸ್ಟ್ ೧೧, ೨೦೦೮ (ಶ್ರಾವಣ, ೧೯ ಶಕ ವರ್ಷ ೧೯೩೧) | ನಂ. ೬೮೧ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**
**ಕಂದಾಯ ಸಚಿವಾಲಯ**

**ವಿಷಯ :** ಮಂಗಳೂರು ತಾಲ್ಲೂಕಿನ ಸರ್ಕಾರಿ ಜಮೀನುಗಳನ್ನು ವಿಶೇಷ ಆರ್ಥಿಕ ವಲಯ ಯೋಜನೆಗಾಗಿ ಕೆ.ಐ.ಎ.ಡಿ.ಬಿ.ಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರ ಪತ್ರ ಸಂ : ಎಲ್ಎನ್‌ಡಿ(1)ಪಿಡಿಆರ್/228/07–08, ದಿ : 02.08.2008.

2) ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ರವರ ಪತ್ರ ಸಂ : ಎಲ್ಎನ್‌ಡಿ(1)ಪಿಡಿಆರ್/228/07–08, ದಿ : 02.08.2008.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರು ಮೇಲೆ ಓದಲಾದ ಕ್ರಮ ಸಂಖ್ಯೆ : 1 ರ ಪತ್ರದಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆ.ಐ.ಎ.ಡಿ.ಬಿ.), ಬೈಕಂಪಾಡಿ, ಮಂಗಳೂರು ರವರು ಮಂಗಳೂರು ವಿಶೇಷ ಆರ್ಥಿಕ ವಲಯದ ಉಪಯೋಗಕ್ಕಾಗಿ ಮಂಗಳೂರು ತಾಲ್ಲೂಕಿನ ಬಾಳ, ಕುಳಾಯಿ, ಕಳವಾರು, ಪೆರ್ಮುದೆ, ಬಜ್ಪೆ ಹಾಗೂ 62 ತೋಕೂರು ಗ್ರಾಮಗಳಲ್ಲಿನ ಖಾಸಗಿ ಜಮೀನುಗಳನ್ನು ಭೂ ಸ್ವಾಧೀನಪಡಿಸಿಕೊಳ್ಳಲಿರುವ ಜಮೀನಿನ ಮಧ್ಯ ಭಾಗದಲ್ಲಿ ಸರ್ಕಾರಿ ಹೊಳೆ, ತೋಡು, ರಸ್ತೆ, ಅನಾಧೀನ, ದಾರಿ ಭೂತಸ್ಥಾನ, ಕೆರೆ, ದೇವಸ್ಥಾನ ಹಾಗೂ ದೇವಸ್ಥಾನ ಕೆರೆ ಜಮೀನುಗಳು ಸಹ ಒಳಗೊಂಡಿರುವುದರಿಂದ, ಈ ಕೆಳಕಂಡ ವಿವಿಧ ಸರ್ವೆ ನಂಬರುಗಳಲ್ಲಿನ ಒಟ್ಟು 59.61.80 ಎಕರೆ ಜಮೀನುಗಳನ್ನು ಪ್ರಚಲಿತ ಮಾರುಕಟ್ಟೆ ದರವು ಕಡಿಮೆ ಇರುವುದರಿಂದ, ಇದರ ಬದಲು ಕೆ.ಐ.ಎ.ಡಿ.ಬಿ. ರವರು ಖಾಸಗಿ ಜಮೀನಿನ ಭೂ ಸ್ವಾಧೀನತೆಯಿಂದ ಭೂ ಮಾಲೀಕರಿಗೆ ನಿಗಧಿಪಡಿಸಿ ನೀಡುವ ಮೊತ್ತ ಎಕರೆ ಒಂದಕ್ಕೆ ರೂ. 8–00 ಲಕ್ಷದಂತೆ ನಿಗಧಿಪಡಿಸಿ, ನಿಯಮಾನುಸಾರ ಇತರೆ ವೆಚ್ಚವನ್ನೊಳಗೊಂಡಂತೆ ಅಗತ್ಯವಿರುವ ಎಲ್ಲಾ ಷರತ್ತುಗಳನ್ನು ವಿಧಿಸಿ, ಕೆ.ಐ.ಎ.ಡಿ.ಬಿ. ರವರಿಗೆ ಮಂಜೂರು ಮಾಡಲು ಸರ್ಕಾರದ ಅನುಮತಿಯನ್ನು ನೀಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿದ್ದರು.

| ಕ್ರ. ಸಂ. | ಗ್ರಾಮ | ವಿಸ್ತೀರ್ಣ ಎ. ಸೆ. |
|---|---|---|
| 1 | ಬಾಳ | 5.52.00 |
| 2 | ಕುಳಾಯಿ | 5.27.00 |
| 3 | ಕಳವಾರು | 15.54.80 |
| 4 | ಪೆರ್ಮುದೆ | 2.91.00 |
| 5 | ಬಜ್ಪೆ | 0.66.00 |
| 6 | 62 ತೋಕೂರು | 29.71.00 |
| | **ಒಟ್ಟು** | **59.61.80** |

ಅಲ್ಲದೇ, ಮಂಜೂರಾತಿಗೆ ಕೋರಿದ್ದ ಜಮೀನುಗಳ ಪೈಕಿ ಕಳವಾರು ಗ್ರಾಮದ ಸ. ನಂ. 40/7ರ 0–31 ಎಕರೆ ಮತ್ತು ಸ. ನಂ. 40/4ರ 0–06 ಎಕರೆ ಸ್ಥಳವು ಆ ಗ್ರಾಮದ ಧಾರ್ಮಿಕ ಶ್ರದ್ಧಾ ಕೇಂದ್ರವಾದ ಶ್ರೀ ಬೆಂಕಿನಾಥೇಶ್ವರ ದೇವಸ್ಥಾನ ಮತ್ತು ಆ ದೇವಸ್ಥಾನದ ಕೆರೆ ಇರುವ ಸ್ಥಳವಾಗಿರುತ್ತದೆ. ಈ ದೇವಸ್ಥಾನವು ಸಾರ್ವಜನಿಕ ದೇವಸ್ಥಾನವಾಗಿದ್ದು ಸರ್ಕಾರದ ಧಾರ್ಮಿಕ ದತ್ತಿ ಉಂಬಳಿಯ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಈ ದೇವಸ್ಥಾನವನ್ನು ಯಾವುದೇ ಕಾರಣಕ್ಕೂ ಸ್ಥಳಾಂತರಿಸಬಾರದೆಂದು

ದೇವಸ್ಥಾನದ ಅಧ್ಯಕ್ಷರು ಮತ್ತು ಮೊಕ್ತೇಸರರು ಹಾಗೂ ಸರ್ವ ಸದಸ್ಯರು, ಶ್ರೀ ಬೆಂಕಿನಾಥೇಶ್ವರ ದೇವಸ್ಥಾನ ಜೀರ್ಣೋದ್ಧಾರ ಸಮಿತಿ ಹಾಗೂ ಗ್ರಾಮಸ್ಥರು ಹಾಗೂ ಇತರೆ ಸಂಘಟನೆಗಳು ತೀವ್ರ ತೆರನಾದ ಆಕ್ಷೇಪವನ್ನು ವ್ಯಕ್ತಪಡಿಸಿ ಮನವಿಗಳನ್ನು ಸಲ್ಲಿಸಿದ್ದು, ಮನವಿಗಳನ್ನು ಪರಿಶೀಲಿಸಿದ ನಂತರ ಈ ದೇವಸ್ಥಾನವನ್ನು ಸ್ಥಳಾಂತರಿಸುವ ಕುರಿತು ಜಿಲ್ಲಾಧಿಕಾರಿಗಳು ಮತ್ತು ಸ್ಥಳೀಯ ಸಮಿತಿಯೊಂದಿಗೆ ಚರ್ಚಿಸಿ ನಿರ್ಧಾರಕ್ಕೆ ಬಂದ ಬಳಿಕವೇ ದೇವಸ್ಥಾನವನ್ನು ಸ್ಥಳಾಂತರಿಸುವ ಷರತ್ತು ವಿಧಿಸಿ ಸದರಿ ದೇವಸ್ಥಾನವಿರುವ ಸ್ಥಳ ಹಾಗೂ ಕೆರೆ ಸ್ಥಳವನ್ನು ಮಂಜೂರಾತಿಗೆ ಪ್ರಸ್ತಾಪಿಸಿದ್ದರು. ಹಾಗೂ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಲಾದ ಜಮೀನುಗಳ ಪೈಕಿ ಕೆಲವೊಂದು ಜಮೀನುಗಳು ಸರ್ಕಾರಿ ಪೊರಂಬೋರು ತೋಡು, ಹೊಳೆ, ರಸ್ತೆ, ದಾರಿ ಅನಾಧೀನ, ಭೂತಸ್ಥಾನ, ದೇವಸ್ಥಾನದ ಕೆರೆ, ಬೆಂಕಿನಾಥೇಶ್ವರ ದೇವಸ್ಥಾನ, ಸಿರಿಗಳ ಗುಂಡ ಇರುವ ದಾಖಲೆಗಳು ಕಂಡು ಬಂದಿದ್ದು, ಕೆಲವೊಂದು ಜಮೀನುಗಳಲ್ಲಿ ಅತಿಕ್ರಮಣದಾರರು ಕಲಂ 94(ಎ), 94(ಬಿ) ಮತ್ತು 94(ಸಿ) ರಡಿಯಲ್ಲಿ ಸಕ್ರಮೀಕರಣ ಕೋರಿ ಸಲ್ಲಿಸಿದ್ದ ಅರ್ಜಿಗಳನ್ನು ಪರಿಗಣಿಸಿದೆ ಹಾಗೂ ತಿರಸ್ಕರಿಸಲಾಗಿದೆ ಎಂದು ವರದಿ ನೀಡಿದ್ದು, ಸದರಿ ಜಮೀನುಗಳನ್ನು ಕೆ.ಐ.ಎ.ಡಿ.ಬಿ. ಯು ಖಾಸಗಿ ಜಮೀನುಗಳಿಗೆ ಮಂಜೂರು ಮಾಡಿರುವ ದರದಂತೆ ನಿಗಧಿಪಡಿಸಿ ಅಗತ್ಯವಿರುವ ಕೆಲವು ಷರತ್ತುಗಳನ್ನು ವಿಧಿಸಿ ಕೆ.ಐ.ಎ.ಡಿ.ಬಿ. ಗೆ ಮಂಜೂರು ಮಾಡುವಂತೆ ಕೋರಿದ್ದರು. ಈ ಪ್ರಸ್ತಾವನೆಯನ್ನು ಮುಂದೂಡಲು ಸರ್ಕಾರವು ತೀರ್ಮಾನಿಸಿತ್ತು.

ತದನಂತರ ಜಿಲ್ಲಾಧಿಕಾರಿಗಳು ದಕ್ಷಿಣ ಕನ್ನಡ ಮಂಗಳೂರು ರವರು ಮೇಲೆ ಓದಲಾದ ಕ್ರಮ ಸಂಖ್ಯೆ : 2ರ ಪತ್ರದಲ್ಲಿ ವಿಶೇಷ ಭೂ ಸ್ವಾಧೀನ ಅಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಳಿ, ಬೈಕಂಪಾಡಿ ಇವರು ನಿರ್ವಸಿತರ ಸಮಿತಿಯಾದ ಸಂಯುಕ್ತ ಹಿತರಕ್ಷಣಾ ಸಮಿತಿ ಜೊತೆ ನಡದ ಸಭೆಯಲ್ಲಿ, ಶ್ರೀ ಬೆಂಕಿನಾಥೇಶ್ವರ ದೇವಸ್ಥಾನವನ್ನು ಪ್ರಸ್ತುತ ಇರುವ ಸ್ಥಳದಲ್ಲೇ ಉಳಿಸಿ, ಅಭಿವೃದ್ಧಿ ಪಡಿಸುವ ಬಗ್ಗೆ ಒಪ್ಪಂದ ಆಗಿರುವ ಹಿನ್ನೆಲೆಯಲ್ಲಿ, ಕಳವಾರು ಗ್ರಾಮದ ಶ್ರೀ ಬೆಂಕಿನಾಥೇಶ್ವರ ದೇವಸ್ಥಾನ ಇರುವ ಸ. ನಂ. 40/7ರ 0.31 ಎಕರೆ ಹೊರತು ಪಡಿಸಿ, ಉಳಿದ ವಿಸ್ತೀರ್ಣವನ್ನು ಮಂಜೂರು ಮಾಡಬಹುದು ಎಂದು ಕೋರಿರುವುದಾಗಿ ವರದಿ ಮಾಡಿರುತ್ತಾರೆ. ಮಂಜೂರಾತಿಗೆ ಕೋರಿರುವ ಒಟ್ಟು ಜಮೀನುಗಳ ಪೈಕಿ ಕಳವಾರು ಶ್ರೀ ಬೆಂಕಿನಾಥೇಶ್ವರ ದೇವಸ್ಥಾನದ ಸ. ನಂ. 40/7ರ 0.31 ಎಕರೆ ಮತ್ತು ಆ ದೇವಸ್ಥಾನದ ಕೆರೆ ಇರುವ ಸ. ನಂ. 40/4ರ 0.06 ಎಕರೆ ಸ್ಥಳವು ಗ್ರಾಮದ ಜನ ಧಾರ್ಮಿಕ ಶ್ರದ್ಧಾ ಕೇಂದ್ರವಾಗಿದ್ದು, ಮಂಗಳೂರು ವಿಶೇಷ ಆರ್ಥಿಕ ವಲಯ ಹಾಗೂ ಸ್ಥಳೀಯ ಸಮಿತಿಯವರ ಒಪ್ಪಂದದಲ್ಲಿ ದೇವಸ್ಥಾನದ 0.31 ಎಕರೆ ಜಮೀನಿನ ಬಗ್ಗೆ ಮಾತ್ರ ಪ್ರಸ್ತಾವಿಸಲಾಗಿದೆ. ಆದರೆ, ದೇವಸ್ಥಾನದ ಕೆರೆಯು ಕೂಡಾ ವಿರಹಿತಗೊಳ್ಳುವುದು ಅಗತ್ಯ. ಈ ಹಿನ್ನೆಲೆಯಲ್ಲಿ ಕಳವಾರು ಗ್ರಾಮದ ಸ. ನಂ. 40/7ರ 0.31 ಎಕರೆ ಹಾಗೂ 40/4ರ 0.06 ಎಕರೆ ಜಮೀನನ್ನು ದೇವಸ್ಥಾನ ಮತ್ತು ಕೆರೆಯ ಬಗ್ಗೆ ವಿರಹಿತಗೊಳಿಸಲು ತೀರ್ಮಾನಿಸಲಾಗಿದೆ. ಹಾಗೂ ದೇವಸ್ಥಾನದಿಂದ ಕೆರೆಯ ಬಳಿಗೆ ನಿರಾತಂಕವಾಗಿ ಸಾಗಲು ಅಗತ್ಯವಿರುವ ರಸ್ತೆಯನ್ನು ಕೂಡಾ ಒದಗಿಸುವುದು ಅಗತ್ಯವಾಗಿರುತ್ತದೆಂದು ಅದರಂತೆ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರು ಈ ಹಿಂದೆ ಮಂಜೂರಾತಿಗಾಗಿ ಪ್ರಸ್ತಾಪಿಸಲಾಗಿದ್ದ 59.61.80 ಎಕರೆ ವಿಸ್ತೀರ್ಣದ ಪೈಕಿ ಸದರಿ 0.37 ಎಕರೆ ವಿಸ್ತೀರ್ಣ ಹೊರತು ಪಡಿಸಿ, ಉಳಿದ 59.24.80 ಎಕರೆ ವಿಸ್ತೀರ್ಣವನ್ನು ದೇವಸ್ಥಾನದಿಂದ ಕೆರೆಗೆ ಸಾಗುವ ರಸ್ತೆಯನ್ನು ಊರ್ಜಿತ ಇಡುವ ಷರತ್ತಿಗೆ ಒಳಪಟ್ಟು ಮಂಗಳೂರು ವಿಶೇಷ ಆರ್ಥಿಕ ವಲಯಕ್ಕೆ ಮಂಜೂರು ಮಾಡುವಂತೆ ಕೋರಿ ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 83 ಎಲ್‌ಜಿಎ 2008, ಬೆಂಗಳೂರು, ದಿನಾಂಕ: 24/ 07/ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಬಾಳ, ಕುಳಾಯಿ, ಕಳವಾರು, ಪೆರ್ಮುದೆ, ಬಜ್ಪೆ, ಹಾಗೂ 62 ತೋಕೂರು ಗ್ರಾಮಗಳಲ್ಲಿನ ಈ ಆದೇಶದ ಅನುಬಂಧದೊಂದಿಗೆ ಲಗತ್ತಿಸಲಾದ ವಿವಿಧ ಸರ್ವೆ ನಂಬರ್‌ಗಳಲ್ಲಿನ ಒಟ್ಟು 59.24.80 ಎಕರೆ ಜಮೀನುಗಳನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 20ರಡಿಯಲ್ಲಿ ಕೆ.ಐ.ಎ.ಡಿ.ಬಿ. ರವರು ಖಾಸಗಿ ಜಮೀನಿನ ಭೂ ಸ್ವಾಧೀನತೆಗಾಗಿ ಭೂ ಮಾಲೀಕರಿಗೆ ನಿಗಧಿಪಡಿಸಿ ನೀಡುವ ಮೊತ್ತ ಎಕರೆ ಒಂದಕ್ಕೆ ರೂ. 8.00 ಲಕ್ಷಕ್ಕೆ ಸಮನಾದ ಬೆಲೆ ಹಾಗೂ ನಿಯಮಾನುಸಾರ ಇತರೆ ವೆಚ್ಚಗಳನ್ನು ವಿಧಿಸಿ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಕೆ.ಐ.ಎ.ಡಿ.ಬಿ. ರವರಿಗೆ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

1. ಶ್ರೀ ಬೆಂಕಿನಾಥೇಶ್ವರ ದೇವಸ್ಥಾನದಿಂದ ಕೆರೆಗೆ ಸಾಗುವ ರಸ್ತೆಯನ್ನು ರಸ್ತೆಯಾಗಿಯೇ ಇಟ್ಟು ಅಭಿವೃದ್ಧಿಪಡಿಸತಕ್ಕದ್ದು.
2. ಪೊರಂಬೋಕು ತೋಡು ಜಮೀನನ್ನು ತೋಡಾಗಿಯೇ ಉಳಿಸಿ ನೀರಿನ ಹರಿವಿಕೆಗೆ ತೊಂದರೆ ಆಗದಂತೆ ಅಭಿವೃದ್ಧಿ ಪಡಿಸತಕ್ಕದ್ದು.
3. ಹೊಳೆ ಪೊರಂಬೋಕು ಸ್ಥಳಗಳನ್ನು ಹೊಳೆಯಾಗಿಯೇ ಉಳಿಸಿಕೊಂಡು ಅಭಿವೃದ್ಧಿ ಪಡಿಸತಕ್ಕದ್ದು.
4. ಪೊರಂಬೋಕು ರಸ್ತೆ, ದಾರಿ ಮುಂತಾದ ಸಾರ್ವಜನಿಕ ಹಿತಾಸಕ್ತಿ ಹೊಂದಿದ ರಸ್ತೆಗಳನ್ನು ರಸ್ತೆಗಳನ್ನಾಗಿಯೇ ಅಭಿವೃದ್ಧಿಪಡಿಸತಕ್ಕದ್ದು.

5. 94(ಎ), 94(ಬಿ) ಮತ್ತು 94(ಸಿ)ರ ಗಳಡಿಯಲ್ಲಿ ಅರ್ಜಿ ಸಲ್ಲಿಸಿದ್ದು, ಆದರೆ ನಿಯಮಾನುಸಾರ ಅರ್ಹತೆ ಇಲ್ಲದ ಕಾರಣ ತಿರಸ್ಕರಿಸಲ್ಪಟ್ಟ ಅರ್ಜಿದಾರರಿಗೆ ಎಸ್.ಜಿ.ಜೆಡ್ ಪುನರ್ ವಸತಿ ಪ್ಯಾಕೇಜ್ ರನ್ವಯ ಎಕ್ಸ್‌ಗ್ರೇಷಿಯಾ ಅಥವಾ ಪರಿಹಾರವನ್ನು ನೀಡುವುದು.

6. ಸಾರ್ವಜನಿಕ ಹಕ್ಕು ಇರುವ ಸ್ಥಳಗಳನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 68(1) ರಂತೆ ಅಧಿಸೂಚನೆ ಹೊರಡಿಸಿ, ನಿಗಧಿತ ಅವಧಿ ಕಳೆದ ಬಳಿಕ ಕರ್ನಾಟಕ ಭೂ–ಕಂದಾಯ ಕಾಯಿದೆಯ ಕಲಂ 68(5)ರಡಿ ಸಾರ್ವಜನಿಕ ಹಕ್ಕನ್ನು ವಿರಹಿತಪಡಿಸಿಕೊಳ್ಳುವ ಬಗ್ಗೆ ಸರ್ಕಾರದಿಂದ ಪ್ರತ್ಯೇಕ ಆದೇಶ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಇ. ಈಶ್ವರ ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ. ಮಂ.)

**ಸರ್ಕಾರದ ಆದೇಶ ಸಂಖ್ಯೆ : ಆರ್ ಡಿ 83 ಎಲ್‌ಜಿಎ 2008, ಬೆಂಗಳೂರು, ದಿನಾಂಕ : 24–07–2009 ಕ್ಕೆ ಅನುಬಂಧ**

| ಕ್ರ. ಸಂ. | ಸರ್ವೆ ನಂಬ್ರ ಮತ್ತು ಸ.ಡಿ. ನಂಬ್ರ | ಕಿಸಂ. | ಆಕಾರ ಬಂದ ಪ್ರಕಾರ ವಿಸ್ತೀರ್ಣ ಎ. ಸೆ. | ಕೆಐಎಡಿಬಿ ಬೈಕಂಪಾಡಿ ಯವರ ಕೋರಿಕೆ ವಿಸ್ತೀರ್ಣ ಎ. ಸೆ. | ಗ್ರಾಮದ ಪಹಣಿ ದಾಖಲೆಯಂತೆ ವಿಸ್ತೀರ್ಣ ಎ. ಸೆ. | ಮಂಜೂರು ಮಾಡಿರುವ ವಿಸ್ತೀರ್ಣ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| **I. ಗ್ರಾಮ : ಬಾಳ** | | | | | | | |
| 1 | 1/1 | ಪೊರಂ | 0.14 | 0.14 | 0.14 | 0.14 | ಖಾಲಿ ಜಾಗ |
| 2 | 29/1 | ಖುಷ್ಕಿ | 5.38 | 5.38 | 5.38 | 5.38 | ಸರ್ಕಾರಿ ಅನಾಧೀನ |
| | | | | | ಒಟ್ಟು | **5.52** | |
| **II. ಗ್ರಾಮ : ಕುಳಾಯಿ** | | | | | | | |
| 1 | 115/1 | ಖುಷ್ಕಿ | 0.26 | 0.26 | 0.26 | 0.26 | ರಸ್ತೆ |
| 2 | 114/1 | ಪೊರಂ | 0.10 | 0.10 | 0.10 | 0.10 | ದಾರಿ |
| 3 | 130/2ಬಿ | ಖುಷ್ಕಿ | 0.14 | 0.14 | 0.14 | 0.14 | ಅನಾಧೀನ ದಾರಿ |
| 4 | 135/2 | ಖುಷ್ಕಿ | 0.24 | 0.24 | 0.24 | 0.24 | ಅನಾಧೀನ ದಾರಿ |
| 5 | 136/2ಬಿ1 | ಖುಷ್ಕಿ | 0.39 | 0.39 | 0.39 | 0.39 | ಸರ್ಕಾರಿ ಅನಾಧೀನ |
| 6 | 136/3 | ಪೊರಂ | 0.35 | 0.35 | 0.35 | 0.35 | ರಸ್ತೆ |
| 7 | 137/1 | ಪೊರಂ | 0.45 | 0.45 | 0.45 | 0.45 | ರಸ್ತೆ |
| 8 | 137/2ಎ | ಖುಷ್ಕಿ | 0.08 | 0.08 | 0.08 | 0.08 | ರಸ್ತೆ |
| 9 | 139/1 | ಖುಷ್ಕಿ | 1.40 | 1.40 | 1.40 | 1.40 | ಅನಾಧೀನ |
| 10 | 127/3 | ಖುಷ್ಕಿ | 0.20 | 0.20 | 0.20 | 0.20 | ಅನಾಧೀನ |
| 11 | 123/9 | ಖುಷ್ಕಿ | 0.30 | 0.30 | 0.30 | 0.30 | ರಸ್ತೆ |
| 12 | 142/4 | ಪೊರಂ | 0.13 | 0.13 | 0.13 | 0.13 | ತೋಡು |
| 13 | 72/2ಎ | ಪೊರಂ | 0.55 | 0.55 | 0.55 | 0.55 | ತೋಡು |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 14 | 72/7 | ಪೊರಂ | 0.10 | 0.10 | 0.10 | 0.10 | ಭೂತಸ್ಥಾನ, ಕೆರೆ ಇತ್ಯಾದಿ |
| 15 | 74/12 | ಪೊರಂ | 0.22 | 0.22 | 0.22 | 0.22 | ತೋಡು |
| 16 | 70/5 | ಖುಷ್ಕಿ | 0.18 | 0.18 | 0.18 | 0.18 | ಅನಾಧೀನ |
| 17 | 70/8ಎ | ಖುಷ್ಕಿ | 0.16 | 0.16 | 0.16 | 0.16 | ಅನಾಧೀನ |
| 18 | 105/2 | ಖುಷ್ಕಿ | 0.02 | 0.02 | 0.02 | 0.02 | ಅನಾಧೀನ |
| | | | | | **ಒಟ್ಟು** | **5.27** | |
| **III. ಗ್ರಾಮ : ಕಳವಾರು** | | | | | | | |
| 1 | 33/13 | ಪೊರಂ | 0.07 | 0.07 | 0.07 | 0.07 | ರಸ್ತೆ |
| 2 | 54/13ಬಿ2 | ಖುಷ್ಕಿ | 0.03 | 0.03 | 0.03 | 0.03 | ಅನಾಧೀನ |
| 3 | 54/13ಸಿ | ಖುಷ್ಕಿ | 0.02 | 0.02 | 0.02 | 0.02 | ಅನಾಧೀನ |
| 4 | 66/4ಎ3 | ಖುಷ್ಕಿ | 2.76 | 2.76 | 2.76 | 2.76 | ಅನಾಧೀನ |
| 5 | 87/6 | ಪೊರಂ | 0.11 | 0.11 | 0.11 | 0.11 | ರಸ್ತೆ |
| 6 | 104/2 | ಖುಷ್ಕಿ | 1.60 | 1.60 | 1.60 | 1.60 | ಅನಾಧೀನ |
| 7 | 104/5 | ಖುಷ್ಕಿ | 0.28 | 0.28 | 0.28 | 0.28 | ಅನಾಧೀನ |
| 8 | 34/3 | ಪೊರಂ | 0.26 | 0.26 | 0.26 | 0.26 | ತೋಡು |
| 9 | 35/6 | ಪೊರಂ | 0.25 | 0.25 | 0.25 | 0.25 | ತೋಡು |
| 10 | 36/5 | ಪೊರಂ | 0.14 | 0.14 | 0.14 | 0.14 | ತೋಡು |
| 11 | 37/2 | ಪೊರಂ | 0.26 | 0.26 | 0.26 | 0.26 | ತೋಡು |
| 12 | 39/18 | ಖುಷ್ಕಿ | 0.24 | 0.24 | 0.24 | 0.24 | ಸರ್ಕಾರಿ ಅನಾಧೀನ |
| 13 | 40/1 | ಪೊರಂ | 0.43 | 0.43 | 0.43 | 0.43 | ತೋಡು |
| 14 | 48/11 | ಪೊರಂ | 0.45 | 0.45 | 0.45 | 0.45 | ತೋಡು |
| 15 | 66/4ಎ1 | ಖುಷ್ಕಿ | 6.16 | 5.07.80 | 5.07.80 | 4.828 | ಅನಾಧೀನ |
| 16 | 45/2 | ಪೊರಂ | 3.45 | 3.45 | 3.45 | 3.45 | ಅಂಬೇಡ್ಕರ್ ಭವನ ಭೂತ ಸ್ಥಾನ ಇತ್ಯಾದಿ |
| | | | | | **ಒಟ್ಟು** | **15.17.80** | |
| **IV. ಗ್ರಾಮ : ಪೆರ್ಮುದೆ** | | | | | | | |
| 1 | 124/1ಎ | ಖುಷ್ಕಿ | 0.75 | 0.75 | 0.75 | 0.75 | ರಸ್ತೆ, ಖಾಲಿ ಜಾಗ |
| 2 | 209/3ಬಿ | ಖುಷ್ಕಿ | 0.50 | 0.50 | 0.50 | 0.50 | ಅನಾಧೀನ |
| 3 | 209/3ಎ | ಖುಷ್ಕಿ | 1.80 | 1.80 | 1.80 | 1.80 | ಅನಾಧೀನ |
| 4 | 32/2 | ಪೊರಂ | 0.81 | 0.81 | 0.81 | 0.81 | ತೋಡು |
| 5 | 32/3 | ಪೊರಂ | 0.05 | 0.05 | 0.05 | 0.05 | ತೋಡು |
| | | | | | **ಒಟ್ಟು** | **2.91** | |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| **V. ಗ್ರಾಮ : ಬಜ್ಪೆ** | | | | | | | |
| 1 | 193/1 | ಪೊರಂ | 0.48 | 0.48 | 0.48 | 0.48 | ರಸ್ತೆ |
| 2 | 193/2 | ಖುಷ್ಕಿ | 0.18 | 0.18 | 0.18 | 0.18 | ಅನಾಧೀನ |
| | | | | | **ಒಟ್ಟು** | **0.66** | |
| **VI. ಗ್ರಾಮ : 62 ತೋಕೂರು** | | | | | | | |
| 1 | 1/1ಎ2 | ಖುಷ್ಕಿ | 0.11 | 0.11 | 0.11 | 0.11 | ಅನಾಧೀನ |
| 2 | 1/1ಎ7 | ಖುಷ್ಕಿ | 0.16 | 0.16 | 0.16 | 0.16 | ಅನಾಧೀನ |
| 3 | 94/2 | ಪೊರಂ | 0.04 | 0.04 | 0.04 | 0.04 | ಸರಕಾರಿ ಹೊಳೆ |
| 4 | 100/1ಎ1 | ಪೊರಂ | 34.08 | 2.40 | 33.00 | 2.40 | ಸರಕಾರಿ ಹೊಳೆ |
| 5 | 103/1ಎ | ಪೊರಂ | 5.28 | 2.00 | 5.28 | 2.00 | ಸರಕಾರಿ ಹೊಳೆ |
| 6 | 35/1ಬಿ | ಖುಷ್ಕಿ | 4.02 | 4.02 | 4.02 | 4.02 | ಅನಾಧೀನ |
| 7 | 104 | ಖುಷ್ಕಿ | 13.24 | 10.00 | 13.24 | 10.00 | ಅನಾಧೀನ |
| 8 | 110/2 | ಖುಷ್ಕಿ | 0.72 | 0.72 | 0.72 | 0.72 | ಅನಾಧೀನ |
| 9 | 110/1ಬಿ2 | ಖುಷ್ಕಿ | 0.44 | 0.44 | 0.44 | 0.44 | ಅನಾಧೀನ |
| 10 | 113/1 | ಖರಾಬು | 0.64 | 0.64 | 0.64 | 0.64 | ಸರಕಾರಿ ತೋಡು |
| 11 | 130/1 | ಖುಷ್ಕಿ | 1.89 | 1.89 | 1.89 | 1.89 | ಅನಾಧೀನ |
| 12 | 114/3 | ಖುಷ್ಕಿ | 0.59 | 0.59 | 0.59 | 0.59 | ರಸ್ತೆ |
| 13 | 132/3 | ಖುಷ್ಕಿ | 0.29 | 0.29 | 0.29 | 0.29 | ಸರಕಾರಿ (ಅನಾಧೀನದಾರಿ) |
| 14 | 132/8 | ಪೊರಂ | 0.07 | 0.07 | 0.07 | 0.07 | ರಸ್ತೆ |
| 15 | 122/6 | ಖುಷ್ಕಿ | 0.19 | 0.19 | 0.19 | 0.19 | ರಸ್ತೆ |
| 16 | 122/8 | ಖುಷ್ಕಿ | 0.28 | 0.28 | 0.28 | 0.28 | ರಸ್ತೆ |
| 17 | 123/2 | ಖುಷ್ಕಿ | 0.52 | 0.52 | 0.52 | 0.52 | ರಸ್ತೆ |
| 18 | 36/9 | ಖುಷ್ಕಿ | 0.32 | 0.32 | 0.32 | 0.32 | ರಸ್ತೆ |
| 19 | 22/10 | ಪೊರಂ | 0.47 | 0.47 | 0.47 | 0.47 | ಸರಕಾರಿ ತೋಡು |
| 20 | 23/3 | ಪೊರಂ | 0.63 | 0.63 | 0.63 | 0.63 | ಸರಕಾರಿ ತೋಡು |
| 21 | 23/1 | ಪೊರಂ | 0.10 | 0.10 | 0.10 | 0.10 | ಸರಕಾರಿ ತೋಡು |
| 22 | 20/1 | ಪೊರಂ | 0.07 | 0.07 | 0.07 | 0.07 | ಸರಕಾರಿ ತೋಡು |
| 23 | 21/2 | ಪೊರಂ | 0.19 | 0.19 | 0.19 | 0.19 | ಸರಕಾರಿ ತೋಡು |
| 24 | 24/2 | ಪೊರಂ | 0.36 | 0.36 | 0.36 | 0.36 | ಸರಕಾರಿ ತೋಡು |
| 25 | 58/3ಸಿ | ಪೊರಂ | 0.47 | 0.47 | 0.47 | 0.47 | ಸಿರಿಗಳ ಗುಂಡ |
| 26 | 22/8 | ಪೊರಂ | 0.24 | 0.24 | 0.24 | 0.24 | ಸರಕಾರಿ ತೋಡು |
| 27 | 123/6ಪಿ1 | ಖುಷ್ಕಿ | 5.75 | 6.10 | 2.50 | 2.50 | ಅನಾಧೀನ |
| | | | | | **ಒಟ್ಟು** | **29.71** | |
| | | | ಮೇಲಿನ ಕ್ರ. ಸಂ. 1 ರಿಂದ 6 ರಲ್ಲಿನ | | **ಒಟ್ಟು** | **59.24.80** | |

**ಇ. ಈಶ್ವರ ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ. ಮಂ.)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಆಗಸ್ಟ್ ೧೦, ೨೦೦೯ (ಶ್ರಾವಣ, ೧೯ ಶಕ ವರ್ಷ ೧೯೩೧) | ನಂ. ೬೮೨ |
| --- | --- | --- |

## ಕರ್ನಾಟಕ ಸರ್ಕಾರದ ನಡವಳಿಗಳು
## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ರಮೇಶ್ ಕಬನೂರು, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬಿಳಿಚೋಡು, ದಾವಣಗೆರೆ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಸಂಬಂಧ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :**

. ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಜಿ(1) ದಾ–19/ 2003–04 ದಿನಾಂಕ: 08/06/2005

:. ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಆದೇಶ ಸಂಖ್ಯೆ: ಸಂಖ್ಯೆ: ಡಿಪಿಜಿ(1) ದಾ–19/ 2003–04 ದಿನಾಂಕ: 19/07/2005

. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಸಂಖ್ಯೆ : : ಮುಜಾಕೋ/ ಜಾಕೋ/ 15/ 2005/06 ದಿನಾಂಕ: 27/12/2005.

:. ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ತಿಳುವಳಿಕೆ ಪತ್ರ ಸಂಖ್ಯೆ: ಸಂಖ್ಯೆ: ಡಿಪಿಜಿ(1) ದಾ–19/ 2003–04 ದಿನಾಂಕ: 20/06/2008

. ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಪ್ರಸ್ತಾವನೆ ಸಂಖ್ಯೆ: ಡಿಪಿಜಿ (1) ದಾ–19/ 2003–04 ದಿನಾಂಕ: 27/01/2009

**ಪ್ರಸ್ತಾವನೆ :**

ಡಾ: ರಮೇಶ್ ಕಬನೂರು, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬಿಳಿಚೋಡು, ದಾವಣಗೆರೆ ಜಿಲ್ಲೆ ಇವರು ದಿನಾಂಕ: 24/05/2003 ರಿಂದ ಇಲ್ಲಿಯವರೆವಿಗೂ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ಮೇಲೆ (1) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿಗೊಳಿಸಿ, ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಹಾಗೂ ಆಯುಕ್ತರು, ಆರೋಗ್ಯ ಮತ್ತು ಕು.ಕ ಇಲಾಖೆ ಇವರ ಹಂತದಲ್ಲಿ ಸದರಿ ವೈದ್ಯರು ಕರ್ತವ್ಯಕ್ಕೆ ಹಾಜರಾಗಿಲ್ಲವಾದ ಕಾರಣ ಅವರಿಗೆ ದಿ:1–03–2005 ರಂದು ಕರ್ತವ್ಯಕ್ಕೆ ಹಾಜರಾಗಲು ಪತ್ರಿಕಾ ಪ್ರಕಟಣೆ ಹೊರಡಿಸಲಾಗಿತ್ತು. ಆದರೆ ವೈದ್ಯರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಈ ಮಧ್ಯೆ ವಿಳಾಸ ನೀಡದೇ ದಿನಾಂಕವನ್ನು ನಮೂದಿಸದೇ ವೈದ್ಯರು ಮನವಿ ಸಲ್ಲಿಸಿ, ಕರ್ತವ್ಯಕ್ಕೆ ಹಾಜರಾಗಲು ಅನುಮತಿಸಲು ಕೋರಿದ್ದ ಕಾರಣಗಳಿಂದ ಪುನ: ದಿನಾಂಕ: 25–06–2005 ರಂದು ಕರ್ತವ್ಯಕ್ಕೆ ಹಾಜರಾಗಲು ಅಧಿಸೂಚನೆ ಹೊರಡಿಸಿ, ಆದೇಶ ನೀಡಲಾಗಿತ್ತು. ಆದರೆ ದಿ:30–06–2005 ರಂದು ಆದೇಶವು ಜಾರಿಯಾಗದೇ ಲಕೋಟೆ ಹಿಂತಿರುಗಿ ಬಂದಿರುತ್ತದೆ.

ಡಾ: ರಮೇಶ್ ಕಬನೂರು, ವೈದ್ಯಾಧಿಕಾರಿಯವರು, ದೋಷಾರೋಪಣ ಪಟ್ಟಿಗೆ ತಮ್ಮ ಲಿಖಿತ ಹೇಳಿಕೆಯನ್ನು ನಿಗದಿತ ಅವಧಿಯಲ್ಲಿ ಸಲ್ಲಿಸಿಲ್ಲವಾದ ಕಾರಣ, ಮೇಲೆ (2) ರಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ದಿನಾಂಕ: 05/03/2005 ರಲ್ಲಿ ವಿಚಾರಣಾಧಿಕಾರಿಗಳು ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ, ಈ ಸಂಬಂಧ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ನೀಡುವಂತೆ ನಿರ್ದೇಶಿಸಿದ್ದರು.

ಮೇಲೆ (3) ರಲ್ಲಿ ಓದಲಾದ ವಿಚಾರಣಾಧಿಕಾರಿಗಳು ಆಯುಕ್ತರಿಗೆ ದಿನಾಂಕ: 27/12/2005 ರಂದು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ, ಸದರಿ ವರದಿಯಲ್ಲಿ ಆರೋಪಿತರ ವಿರುದ್ಧ ಮಾಡಲಾದ ಅನಧಿಕೃತ ಗೈರುಹಾಜರಿ ಆರೋಪವು ರುಜುವಾತಾಗಿದೆ ಎಂದು ವರದಿ ನೀಡಿರುತ್ತಾರೆ.

ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಮೇಲೆ (4) ರಲ್ಲಿ ಓದಲಾದ ತಿಳುವಳಿಕೆ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಆರೋಪಿತರಿಗೆ ಜಾರಿಗೊಳಿಸಿ, ತಮ್ಮ ಹೇಳಿಕೆ ಏನಾದರೂ ಇದ್ದಲ್ಲಿ 15 ದಿನಗಳ ಅವಧಿಯೊಳಗೆ ಸಲ್ಲಿಸುವಂತೆ ಸೂಚಿಸಿದ್ದು, ಅದು ಆರೋಪಿತರಿಗೆ ಜಾರಿಯಾಗದೆ ಸದರಿ ಅಧಿಕಾರಿಯು ಸದರಿ ವಿಳಾಸದಲ್ಲಿ ವಾಸವಾಗಿಲ್ಲವೆಂಬ ಷರಾದೊಂದಿಗೆ ಹಿಂದಿರುಗಿದೆ ಎಂದು ತಿಳಿಸಿರುತ್ತಾರೆ.

ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ಈ ಸಂಬಂಧ ದೋಷಾರೋಪಣಾ ಪಟ್ಟಿ ಹಾಗು ನೋಟೀಸನ್ನು ಸ್ವೀಕರಿಸದೆ ಹಾಗು ಸದರಿಯವರು ದಿನಾಂಕ: 24/05/2003

ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾದ ಕಾರಣ ಈ ಸಂಬಂಧ ಸರ್ಕಾರದ ಹಂತದಲ್ಲಿ ಸೂಕ್ತ ಕ್ರಮ ಕೈಗೊಳ್ಳುವಂತೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆ, ಸಂಬಂಧಿಸಿದ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಡಾ:ರಮೇಶ್ ಕಬನೂರು ರವರು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಮಟ್ಟದ ಸರ್ಕಾರಿ ವೈದ್ಯರಾಗಿದ್ದು, ಕಾರಣ ನೀಡದೆ ಯಾವುದೇ ರಜೆಯನ್ನು ಸಲ್ಲಿಸದೆ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆಯದೆ ಅಥವಾ ರಜೆ ಮಂಜೂರಾತಿ ಇಲ್ಲದೆ ಸರ್ಕಾರಿ ಸೇವೆಗೆ ದೀರ್ಘಾವಧಿ ಗೈರುಹಾಜರಾಗಿ ಸಾರ್ವಜನಿಕ ಸೇವೆಗೆ ತೊಂದರೆಯಾಗಿರುವುದರಿಂದ ಹಾಗೂ ವಿಚಾರಣಾಧಿಕಾರಿಯವರ ವರದಿಯಲ್ಲಿ ಅನಧಿಕೃತ ಗೈರುಹಾಜರಿ ಆರೋಪ ಸಾಬೀತಾಗಿದ್ದು, ಸದರಿ ವೈದ್ಯರು ನೋಟೀಸಿಗೂ ಉತ್ತರಿಸದೆ ಸರ್ಕಾರದ ಪತ್ರಗಳಿಗೆ ಸ್ಪಂದಿಸದೆ ಹಾಗು ಸೇವೆಗೆ ಹಾಜರಾಗದ ಪ್ರಯುಕ್ತ ಹಾಗು ಅವರನ್ನು ಸಂಪರ್ಕಿಸುವುದು ಅಸಾಧ್ಯವಾಗಿರುವುದರಿಂದ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮಗಳ ನಿಯಮ-14 **(II)** ರಲ್ಲಿನ ಅಧಿಕಾರವನ್ನು ಚಲಾಯಿಸಿ, ಡಾ: ರಮೇಶ್ ಕಬನೂರು, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಇವರನ್ನು ಸದರಿ ನಿಯಮಾವಳಿಗಳ ನಿಯಮ-8 (viii) ರಡಿಯಲ್ಲಿ ಅವರನ್ನು ಸೇವೆಯಿಂದ ವಜಾಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 41 ಎಂಎಸ್ಎ 2009, ಬೆಂಗಳೂರು, ದಿನಾಂಕ: 08/ 06/ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ-**8 (VIII)** ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಡಾ:ರಮೇಶ್ ಕಬನೂರು, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬಿಳಿಚೋಡು, ದಾವಣಗೆರೆ ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಆಗಸ್ಟ್ ೧೦, ೨೦೦೯ (ಶ್ರಾವಣ, ೧೯ ಶಕ ವರ್ಷ ೧೯೩೧) | ನಂ. ೬೮೩ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**
**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಡಾ: ನಾಯಕ್ ವಿನಿತಾ ಪ್ರಭಾಕರ್, ಸ್ತ್ರೀರೋಗ ತಜ್ಞರು, ಸಿವಿಲ್ ಸರ್ಜನ್, ಉಪ ವಿಭಾಗೀಯ ಆಸ್ಪತ್ರೆ, ಸಾಗರ, ಶಿವಮೊಗ್ಗ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ವಿರುದ್ಧ ಶಿಸ್ತುಕ್ರಮ – ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ :**

1. ಆದೇಶ ಸಂಖ್ಯೆ: ಡಿಪಿಜಿ / ಬೆಂವಿ(2)/ ಶಿ-12/ 2006-07 ದಿನಾಂಕ: 24/08/2006
2. ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಜಿ / ಬೆಂವಿ(2)/ ಶಿ-12/ 2006-07 ದಿನಾಂಕ: 17/10/2006
3. ಡಾ: ನಾಯಕ್ ವಿನಿತಾ ಪ್ರಭಾಕರ್ ಇವರು ಸಲ್ಲಿಸಿರುವ ರಕ್ಷಣಾ ಹೇಳಿಕೆ ದಿನಾಂಕ: 05/11/2006
4. ಆಯುಕ್ತರು, ಆಕುಕ.ಸೇವೆಗಳು, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಪಿಜಿ / ಬೆಂವಿ(2)/ ಶಿ-12/ 2006-07 ದಿನಾಂಕ: 21/05/2007
5. ಮುಖ್ಯ ಜಾಗೃತಾಧಿಕಾರಿಗಳು (ಜಾಕೋ), ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ: ಮುಜಾಅ/ ಜಾಕೋ/04/ 2007-08 ದಿನಾಂಕ: 05/08/2008
6. ಆಯುಕ್ತರು, ಆಕುಕ.ಸೇವೆಗಳು, ಬೆಂಗಳೂರು ಇವರ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಜಿ

/ ಬೆಂವಿ(2)/ ಶಿ–12/ 2006–07 ದಿನಾಂಕ: 04/09/2008

7. ಪತ್ರ ಸಂಖ್ಯೆ: ಆಯುಕ್ತರು, ಆಕುಕ.ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಜಿ / ಬೆಂವಿ(2)/ ಶಿ–12/ 2006–07 ದಿನಾಂಕ: 03/12/2008

**ಪ್ರಸ್ತಾವನೆ :**

ಡಾ: ನಾಯಕ್ ವಿನಿತಾ ಪ್ರಭಾಕರ್, ಸ್ತ್ರೀರೋಗ ತಜ್ಞರು, ಸಿವಿಲ್ ಸರ್ಜನ್, ಉಪ ವಿಭಾಗೀಯ ಆಸ್ಪತ್ರೆ, ಸಾಗರ, ಶಿವಮೊಗ್ಗ ಜಿಲ್ಲೆ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 01/04/2006 ರಿಂದ ದಿನಾಂಕ: 29/04/2006 ರ ವರೆಗೆ ರಜೆಯ ಮೇಲೆ ತೆರಳಿ, ರಜೆ ಮುಗಿದ ನಂತರ ದಿನಾಂಕ: 30/04/2006 ರಂದು ಸೇವೆಗೆ ಹಾಜರಾಗದೆ ಪುನ: ರಜೆಯನ್ನು 40 ದಿನಗಳವರೆಗೆ ಮುಂದುವರೆಸಿದ್ದು, ಸದರಿ ರಜೆ ಮಂಜೂರು ಮಾಡಲು ಸಾಧ್ಯವಿಲ್ಲವೆಂದು ಕರ್ತವ್ಯಕ್ಕೆ ಮರಳುವಂತೆ ತಿಳುವಳಿಕೆ ಪತ್ರವನ್ನು ನೀಡಿದ್ದರೂ ಸಹ ಅದಕ್ಕೆ ಸ್ಪಂದಿಸದೆ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾದ ಆರೋಪಕ್ಕೆ ಸಂಬಂಧಿಸಿದಂತೆ ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಸದರಿ ವೈದ್ಯರನ್ನು ದಿನಾಂಕ: 24/08/2006 ರ ಆದೇಶದಲ್ಲಿ ಇಲಾಖಾ ವಿಚಾರಣೆ ಬಾಕಿ ಇರಿಸಿ, ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿದ್ದು, ಸದರಿ ಆದೇಶವು ಈ ವೈದ್ಯಾಧಿಕಾರಿಗೆ ಜಾರಿಯಾಗದೆ ಹಿಂದಿರುಗಿದ ಕಾರಣ ಮತ್ತು ಈ ಮಧ್ಯೆ ಸದರಿ ವೈದ್ಯಾಧಿಕಾರಿ ಅವರನ್ನು ಸಮುದಾಯ ಆರೋಗ್ಯ ಕೇಂದ್ರ, ಶಿರಾಳಕೊಪ್ಪ ಇಲ್ಲಿಗೆ ವರ್ಗಾವಣೆ ಮಾಡಿದ ನಂತರವೂ ಸಹ ಕರ್ತವ್ಯಕ್ಕೆ ಹಾಜರಾಗದ ಕಾರಣ ಇವರಿಗೆ ಮೇಲೆ (2) ರಲ್ಲಿ ಓದಲಾದ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ, ರಕ್ಷಣಾ ಹೇಳಿಕೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಅದರಂತೆ ಡಾ: ನಾಯಕ್ ವಿನಿತಾ ಪ್ರಭಾಕರ್ ರವರು ಆಯುಕ್ತರು ಹೊರಡಿಸಿದ ಕಾರಣ ಕೇಳುವ ನೋಟೀಸಿಗೆ ಮೇಲೆ (3) ರಲ್ಲಿ ಓದಲಾದ ಪತ್ರದ ಮೂಲಕ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು, ಈ ರಕ್ಷಣಾ ಹೇಳಿಕೆಯಲ್ಲಿ ಅವರು ನೀಡಿದ ಕಾರಣಗಳು ತೃಪ್ತಿಕರವಾಗಿಲ್ಲದ ಕಾರಣ, ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ಇವರು ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲು ನಿರ್ಧರಿಸಿ ಮೇಲೆ (4) ರಲ್ಲಿ ಓದಲಾದ ಆದೇಶದಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ, ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಈ ಮಧ್ಯೆ ಸದರಿ ವೈದ್ಯಾಧಿಕಾರಿಗಳು ದಿನಾಂಕ: 30/08/2006 ರಂದು ತಮ್ಮ ಹುದ್ದೆಗೆ ರಾಜೀನಾಮೆ ಸಲ್ಲಿಸಿದ್ದು, ವಿಚಾರಣಾ ಪ್ರಕ್ರಿಯೆ ಪ್ರಾರಂಭಗೊಂಡ ಕಾರಣ, ಆಯುಕ್ತರು ರಾಜೀನಾಮೆ ಪತ್ರವನ್ನು ಅಂಗೀಕರಿಸಿರುವುದಿಲ್ಲ.

ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಗಳು ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ದಿನಾಂಕ: 05/08/2008 ರಂದು ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರಿಗೆ ಸಲ್ಲಿಸಿದ್ದು, ವಿಚಾರಣಾ ವರದಿಯಲ್ಲಿ ಆಪಾದಿತರ ವಿರುದ್ಧ ಮಾಡಲಾದ ಆರೋಪಗಳಲ್ಲಿ ಅನಧಿಕೃತ ಗೈರುಹಾಜರಿಯ ಆರೋಪವು ಸಾಬೀತಾಗಿದೆ ಎಂದು ವರದಿಯನ್ನು ನೀಡಿರುತ್ತಾರೆ.

ಸದರಿ ಅಧಿಕಾರಿಯ ವಿರುದ್ಧದ ಗೈರುಹಾಜರಿಯ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವ ಕಾರಣ, ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಮೇಲೆ (6) ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾ ವರದಿಯೊಂದಿಗೆ ತಿಳುವಳಿಕೆ ಪತ್ರದ ಮೂಲಕ ಆರೋಪಿತ ವೈದ್ಯಾಧಿಕಾರಿಗಳಿಗೆ ಜಾರಿ ಮಾಡಿ, ಈ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ವಿವರಣೆಯನ್ನು ಕೋರಿದ್ದರು. ಡಾ: ನಾಯಕ್ ವಿನಿತಾ ಪ್ರಭಾಕರ್ ರವರು ಸದರಿ ನೋಟೀಸನ್ನು ಪಡೆದಿದ್ದರೂ ಸಹ ತಮ್ಮ ರಕ್ಷಣಾ ಹೇಳಿಕೆಯನ್ನು ನಿಗದಿತ ಅವಧಿಯಲ್ಲಿ ಸಲ್ಲಿಸದ ಕಾರಣ, ಗೈರುಹಾಜರಿಯು ವಿಚಾರಣಾ ವರದಿಯಿಂದ ಸಾಬೀತಾಗಿದ್ದರಿಂದ, ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ಮೇಲೆ (7) ರಲ್ಲಿ ಓದಲಾದ ಪತ್ರದಲ್ಲಿ ಸದರಿ ಅಧಿಕಾರಿಯು ದೀರ್ಘಕಾಲ ಅನಧಿಕೃತ ಗೈರುಹಾಜರಾದ ಕಾರಣ ಕಠಿಣ ದಂಡನೆ ವಿಧಿಸುವ ಬಗ್ಗೆ ನಿರ್ಣಯ ಕೈಗೊಳ್ಳುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆ, ವಿಚಾರಣಾಧಿಕಾರಿಗಳ ವಿಚಾರಣಾ ವರದಿ, ಸಾಕ್ಷಿಗಳು ಮತ್ತು ದಾಖಲೆಗಳನ್ನು ಪರಿಶೀಲಿಸಿದೆ. ಡಾ: ನಾಯಕ್ ವಿನಿತಾ ಪ್ರಭಾಕರ್ ಅವರು ದಿನಾಂಕ: 30/04/2006 ರಿಂದ ಇಲ್ಲಿಯವರೆವಿಗೂ ಸೇವೆಗೆ ಅನಧಿಕೃತ ಗೈರುಹಾಜರಾಗಿದ್ದು, ವಿಚಾರಣೆಗೆ ಒಂದು ಭಾರಿ ಮಾತ್ರ ಅಂದರೆ ದಿನಾಂಕ: 25/07/2007 ರಂದು ಹಾಜರಾಗಿ ತದ ನಂತರ ವಿಚಾರಣೆಗೆ ಹಾಜರಾಗಿರುವುದಿಲ್ಲ. ವಿಚಾರಣಾಧಿಕಾರಿಗಳು ಕಳುಹಿಸಿದ ನೋಟೀಸಿಗೂ ಸ್ಪಂದಿಸದೆ ಇರುವುದು, ಕರ್ತವ್ಯಕ್ಕೆ ಹಿಂದಿರುಗದೆ ಕರ್ತವ್ಯಲೋಪವೆಸಗಿರುವುದು ಇಲಾಖಾ ವಿಚಾರಣೆಯಿಂದ ದೃಢಪಟ್ಟಿರುತ್ತದೆ.

ಡಾ:ನಾಯಕ ವಿನಿತಾ ಪ್ರಭಾಕರ್ ರವರು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಸರ್ಕಾರಿ ವೈದ್ಯರಾಗಿದ್ದು, ಕಾರಣ ನೀಡದೆ ಯಾವುದೇ ರಜೆಯನ್ನು ಸಲ್ಲಿಸದೆ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿ ಪಡೆಯದೆ ಅಥವಾ ರಜೆ ಮಂಜೂರಾತಿ ಇಲ್ಲದೆ ಸರ್ಕಾರಿ ಸೇವೆಗೆ ದೀರ್ಘಾವಧಿ ಗೈರುಹಾಜರಾಗಿರುವುದಲ್ಲದೆ ಸರ್ಕಾರಿ ಸೇವೆಗೆ ತಮಗೆ ಇಷ್ಟ ಬಂದಾಗ ಬರುವುದು,

ಹೋಗುತ್ತಿರುವುದರಿಂದ ಸಾರ್ವಜನಿಕ ಸೇವೆಗೆ ತೊಂದರೆಯಾಗಿರುವ ಕಾರಣ ಹಾಗು ವಿಚಾರಣಾಧಿಕಾರಿಯವರ ವರದಿಯಲ್ಲಿ ಅನಧಿಕೃತ ಗೈರುಹಾಜರಿ ಆರೋಪಗಳು ಸಾಬೀತಾಗಿರುವುದರಿಂದ, ಸರ್ಕಾರವು ಇದನ್ನು ಗಂಭೀರವಾಗಿ ಪರಿಗಣಿಸಿ, ಇವರು ಸರ್ಕಾರಿ ನೌಕರರಿಗೆ ಸಲ್ಲದ ವರ್ತನೆ ಎಸಗಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ– 8(viii) ರಡಿಯಲ್ಲಿ ಪ್ರದತ್ತವಾದ ಅಧಿಕಾರಿವನ್ನು ಚಲಾಯಿಸಿ, ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 479 ಎಂಎಸ್ಎ 2008, ಬೆಂಗಳೂರು, ದಿನಾಂಕ: 17–07–2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ: ನಾಯಕ್ ವಿನಿತಾ ಪ್ರಭಾಕರ್, ಸ್ತ್ರೀರೋಗ ತಜ್ಞರು, ಸಿವಿಲ್ ಸರ್ಜನ್, ಉಪ ವಿಭಾಗೀಯ ಆಸ್ಪತ್ರೆ, ಸಾಗರ, ಶಿವಮೊಗ್ಗ ಜಿಲ್ಲೆ ಇವರು ದಿನಾಂಕ: 30/04/2006 ರಿಂದ ಇದುವರೆವಿಗೂ ಸೇವೆಗೆ ಅನಧಿಕೃತ ಗೈರುಹಾಜರಾಗಿರುವ ಆರೋಪವು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು 1957ರ, ನಿಯಮ–8 (viii) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪದ್ಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಆಗಸ್ಟ್ ೧೦, ೨೦೦೯ (ಶ್ರಾವಣ, ೧೯ ಶಕ ವರ್ಷ ೧೯೩೧) | ನಂ. ೬೮೪ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು
## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಯೋಗಿತಾ ಜನಾರ್ಧನ್, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬಾಗಲೂರು, ಬೆಂಗಳೂರು ನಗರ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಸಂಬಂಧ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :**

1) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ನೋಟೀಸ್ ಸಂಖ್ಯೆ: ಡಿಪಿಜಿ/ ಬೆಂನ/ 5/ 2006–07 ದಿನಾಂಕ: 15/05/2007
2) ಆಯುಕ್ತರ ಆದೇಶ ಸಂಖ್ಯೆ: ಡಿಪಿಜಿ/ ಬೆಂನ/ 5/ 2006–07 ದಿನಾಂಕ: 28/03/2008.
3) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಸಂಖ್ಯೆ: ಮುಜಾಅ/ ಜಾಕೋ/ 01/2008–09 ದಿನಾಂಕ: 23/01/2009.
4) ಆಯುಕ್ತರ ಆಕುಕ.ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಜಿ/ ಬೆಂನ/ 5/ 2006–07 ದಿನಾಂಕ: 21/03/2009.

**ಪ್ರಸ್ತಾವನೆ :**

ಡಾ:ಯೋಗಿತಾ ಜನಾರ್ಧನ್, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬಾಗಲೂರು, ಬೆಂಗಳೂರು ನಗರ ಜಿಲ್ಲೆ ಇವರು ದಿನಾಂಕ: 29/07/2004 ರಂದು ಸರ್ಕಾರಿ ಸೇವೆಗೆ ಸೇರಿದ್ದು, ಖಾಯಂ ಪೂರ್ವ ಅವಧಿಯಲ್ಲಿಯೇ ಅಂದರೆ ದಿನಾಂಕ: 04/10/2005 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ, ಸದರಿ ವೈದ್ಯಾಧಿಕಾರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರಡಿಯಲ್ಲಿ ಮೇಲೆ (1) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಆಪಾದಿತರಿಗೆ ಜಾರಿ ಮಾಡಿ, ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಡಾ:ಯೋಗಿತಾ ಜನಾರ್ಧನ್ ರವರು ದಿನಾಂಕ: 15/05/2007 ರ ಆಯುಕ್ತರ ನೋಟೀಸಿಗೆ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿಲ್ಲವಾದ ಕಾರಣ ಹಾಗು ನೋಟೀಸ್ ಜಾರಿಯಾಗದೆ ವಿಳಾಸದಾರರು ಇರುವುದಿಲ್ಲ ಎಂಬ ಷರಾದೊಂದಿಗೆ

ಹಿಂದಿರುಗಿದ್ದ ಕಾರಣ, ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಆಯುಕ್ತರು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ದಿನಾಂಕ: 28/03/2008 ರಂದು ನೇಮಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯವರು ಪ್ರಕರಣಕ್ಕೆ ಸಂಬಂಧಿಸಿದಂತೆ, ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಮೇಲೆ (3) ರಲ್ಲಿ ಓದಲಾದ ಪತ್ರದ ಮೂಲಕ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ಇವರಿಗೆ ಸಲ್ಲಿಸಿದ್ದು, ಸದರಿ ವಿಚಾರಣಾ ವರದಿಯ ಅನುಸಾರ ಡಾ: ಯೋಗಿತಾ ಜನಾರ್ಧನ್ ಇವರ ವಿರುದ್ಧ ಮಾಡಲಾದ ಅನಧಿಕೃತ ಗೈರುಹಾಜರಿ ಆರೋಪವು ರುಜುವಾತಾಗಿದೆ ಎಂದು ತಿಳಿಸಿರುತ್ತಾರೆ.

ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಸದರಿ ವೈದ್ಯಾಧಿಕಾರಿಯು ವಿಚಾರಣೆಗೆ ಹಾಜರಾಗದೆ ಕರ್ತವ್ಯಕ್ಕೆ ಮರಳದೆ ಹಾಗು ವೈದ್ಯರ ಸ್ವ–ವಿಳಾಸಕ್ಕೆ ಕಳುಹಿಸಿದ್ದ ನೋಟೀಸ್ ಜಾರಿಯಾಗದೆ, ವಿಳಾಸದಲ್ಲಿ ಅಧಿಕಾರಿಯು ಇಲ್ಲದೆ ಹಿಂದಿರುಗಿದೆ ಎಂದು, ಆಪಾದಿತ ವೈದ್ಯರಿಂದ ಯಾವುದೇ ಉತ್ತರ ಬಂದಿರುವುದಿಲ್ಲವೆಂದು ತಿಳಿಸಿ, ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಡಾ: ಯೋಗಿತಾ ಜನಾರ್ಧನ್ ಇವರು ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಅನಧಿಕೃತ ಗೈರುಹಾಜರಿಯಾಗಿದ್ದು, ಇವರ ಅನಧಿಕೃತ ಗೈರುಹಾಜರಿ ಇಲಾಖಾ ವಿಚಾರಣೆಯಿಂದಲೂ ಸಹ ಸಾಬೀತಾಗಿರುವುದರಿಂದ ಕಠಿಣ ದಂಡನೆ ವಿಧಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿ, ದಾಖಲೆಗಳು, ಸಾಕ್ಷಿಗಳ ಹೇಳಿಕೆಗಳು ಹಾಗು ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಡಾ: ಯೋಗಿತಾ ಜನಾರ್ಧನ್, ಮಹಿಳಾ ವೈದ್ಯಾಧಿಕಾರಿ ಇವರು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಮಟ್ಟದ ಸರ್ಕಾರಿ ವೈದ್ಯಾರಾಗಿದ್ದು, ಕಾರಣ ನೀಡದೆ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೇ, ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಅಥವಾ ರಜೆ ಮಂಜೂರಾತಿ ಇಲ್ಲದೆ ಸರ್ಕಾರಿ ಸೇವೆಗೆ ದೀರ್ಘಾವಧಿಯ ಕಾಲ ಅನಧಿಕೃತವಾಗಿ ಗೈರುಹಾಜರಾಗಿರುವುದು ಇಲಾಖಾ ವಿಚಾರಣೆಯಿಂದ ಹಾಗೂ ದಾಖಲಾತಿಗಳಿಂದ ದೃಢಪಟ್ಟಿರುತ್ತದೆ ಹಾಗು ದಿನಾಂಕ: 04/10/2005 ರಿಂದ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರುಹಾಜರಾಗಿದ್ದು, ಇವರು ಖಾಯಂ ಪೂರ್ವ ಸೇವಾವಧಿಯನ್ನು ಸಹ ಪೂರೈಸದೆ ಇರುವುದರಿಂದ, ಈ ನಡತೆಯು ಸರ್ಕಾರಿ ನೌಕರರಿಗೆ ತಕ್ಕದ್ದಲ್ಲವೆಂದು ಇವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 119 ಎಂಎಸ್ಎ 2009, ಬೆಂಗಳೂರು, ದಿನಾಂಕ: 09/ 07/ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ:ಯೋಗಿತಾ ಜನಾರ್ಧನ್, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬಾಗಲೂರು, ಬೆಂಗಳೂರು ನಗರ ಜಿಲ್ಲೆ ಇವರು ಖಾಯಂಪೂರ್ವ ಸೇವಾವಧಿಯಲ್ಲಿ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿ, ಕರ್ತವ್ಯಚ್ಯುತಿ ಎಸಗಿರುವುದರಿಂದ, ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ), ನಿಯಮಾವಳಿಗಳು 1977ರ, ನಿಯಮ–6 ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಆಗಸ್ಟ್ ೧೧, ೨೦೦೯ (ಶ್ರಾವಣ ೨೦, ಶಕ ವರ್ಷ ೧೯೩೧) | ನಂ. ೬೮೫ |
|---|---|---|

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಗ್ರಾಅಪ/83/ಜಿಪಸ/2009 (ಭಾ–1), ಬೆಂಗಳೂರು, ದಿನಾಂಕ: 11ನೇ ಆಗಸ್ಟ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ/83/ಜಿಪಸ/2009 ದಿನಾಂಕ: 05–05–2009 ರಲ್ಲಿ ಗದಗ್ ಜಿಲ್ಲೆಯ ಈ ಕೆಳಕಂಡ ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳಿಗೆ ನಿಗದಿಪಡಿಸಲಾದ ಮೀಸಲಾತಿಯನ್ನು, ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 13346/2009 ರಲ್ಲಿ ದಿನಾಂಕ: 04–08–2009 ರಂದು ನೀಡಿರುವ ಆದೇಶದಂತೆ, ಪರಿಷ್ಕರಿಸಿ ಈ ಕೆಳಗಿನಂತೆ ಅಧಿಸೂಚಿಸಲಾಗಿದೆ.

